Table of Contents

ಕರ್ನಾಟಕ ಸರ್ಕಾರ

# ಸಮಾಜ ವಿಜ್ಞಾನ - ಭಾಗ-1

(2 ಸಂಪುಟಗಳಲ್ಲಿ) ಸಂಪುಟ-1

ಕನ್ನಡ ಮಾಧ್ಯಮ (ಪರಿಷ್ಕೃತ)

ಏಳನೆಯ ತರಗತಿ

ಕರ್ನಾಟಕ ಪಠ್ಯಪುಸ್ತಕ ಸಂಘ(ರಿ.)

100 ಅಡಿ ವರ್ತುಲ ರಸ್ತೆ,

ಬನಶಂಕರಿ 3ನೇ ಹಂತ,

ಬೆಂಗಳೂರು- 560 085

# ಮುನ್ನುಡಿ

2005 ನೇ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಕರ್ನಾಟಕ ಪಠ್ಯಪುಸ್ತಕ ಸಂಘವು 2010 ನೇ ಸಾಲಿನಿಂದ ಒಂದನೇ ತರಗತಿಯಿಂದ ಹತ್ತನೇ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು 12 ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಕೋರ್ ವಿಷಯಗಳನ್ನು 7 ಮಾಧ್ಯಮಗಳಲ್ಲಿ ರಚನೆ ಮಾಡಲಾಗುತ್ತಿದೆ. 1 ರಿಂದ 4 ನೇ ತರಗತಿಯವರೆಗೆ ಪರಿಸರ ವಿಜ್ಞಾನ, ಗಣಿತ ಮತ್ತು 5 ರಿಂದ 10 ನೇ ತರಗತಿಯವರೆಗೆ ಕೋರ್ ವಿಷಯಗಳಾದ ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳಿರುತ್ತವೆ.

**2005 ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.**

1. ಕಲಿಕೆಯನ್ನು ಜೀವನದ ಅವಶ್ಯಕತೆಗಳೊಂದಿಗೆ ಜೋಡಿಸುವುದು.
2. ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು.
3. ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು.
4. ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು.
5. ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು.
6. ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು.
7. ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು.
8. ಶಾಲೆಯ ಹೊರಗಿನ ಬದುಕಿಗೆ ಜ್ಞಾನ ಸಂಯೋಜನೆ.
9. ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.

ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Integrated Approach) ಹಾಗೂ ಸುರುಳಿಯಾಕಾರದ ವಿಧಾನ (Constructive Approach)ಗಳನ್ನು ಅಳವಡಿಸಲಾಗಿದೆ.

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಅವಶ್ಯಕ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ

ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ನಿತ್ಯ ಜೀವನದಲ್ಲಿ ಗಣಿತವು ಎಲ್ಲಾ ಹಂತಗಳಲ್ಲೂ ಯಶಸಿಗೆ ಅತ್ಯಾವಶ್ಯಕವಾಗಿದೆ. ರಾಷ್ಟ್ರೀಯ ಪಠ್ಯಕ್ರಮ- 2005 ರಂತೆ ಗಣಿತವು ಕೆಲವು ಪರಿಕಲ್ಪನೆಗಳನ್ನು ಅರ್ಥಮಾಡಿಕೊಂಡು ಸಿದ್ಧಾಂತಗಳನ್ನು ನಿರೂಪಿಸಿ, ಪ್ರಮೇಯಗಳನ್ನು ಸಾಧಿಸಿ, ಲೆಕ್ಕಗಳನ್ನು ಮಾಡಿ ಪರೀಕ್ಷೆಯಲ್ಲಿ ಉತ್ತಮ ಅಂಕಗಳನ್ನು ಪಡೆಯುವುದನ್ನು ಬಿಟ್ಟು ಗಣಿತವನ್ನು ಜೀವನದ ಸಕಲ ಕ್ಷೇತ್ರಗಳಲ್ಲೂ ಬಳಸುವ ಸಾಮರ್ಥ್ಯವನ್ನು ಬೆಳೆಸಿಕೊಂಡು ಜೀವನದಲ್ಲಿ ಯಶಸ್ಸನ್ನು ಗಳಿಸುವಂತೆ ಮಾಡಬೇಕು. ಅದು ಸಹಕಾರೀ ಕಲಿಕೆಗೂ ಪೂರಕವಾಗಿರಬೇಕು. ಬಹುತೇಕ ಮಂದಿ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಗಣಿತವೆಂದರೆ ಭಯ. ಈ ಭಯವನ್ನು ಹೋಗಲಾಡಿಸಲು ವಿನೋದಗಣಿತ, ಕಥೆಗಳು, ಒಗಟುಗಳು, ಗೂಢಪ್ರಶ್ನೆಗಳು ಮುಂತಾದ ಅಂಶಗಳನ್ನು ಸೇರಿಸಲಾಗಿದೆ. ಪ್ರಾಥಮಿಕ ಹಂತದಲ್ಲಿ ಚಟುವಟಿಕೆಯ ಮೂಲಕ ಅಥವಾ ಕುತೂಹಲ ಕೆರಳಿಸುವ ಕಥೆಗಳ ಮೂಲಕ ಪ್ರತಿಯೊಂದು ಪರಿಕಲ್ಪನೆಯನ್ನು ವಿವರಿಸಲಾಗಿದೆ. ಪ್ರಾಚೀನ ಭಾರತದ ಶ್ರೇಷ್ಠ ಗಣಿತ ಶಾಸ್ತ್ರಜ್ಞರ ಕೊಡುಗೆಗಳನ್ನು ಸೂಕ್ತ ಸಂದರ್ಭಗಳಲ್ಲಿ ಕೊಡಲಾಗಿದೆ.

ನಾವಿಂದು ವಿಜ್ಞಾನ ತಂತ್ರಜ್ಞಾನ ಯುಗದಲ್ಲಿ ಜೀವಿಸುತಿದ್ದೇವೆ. ಕಳೆದ ಅರ್ಧಶತಮಾನದಲ್ಲಿ ಮಾನವನ ಅದ್ಭುತ ಕನಸುಗಳು ನನಸಾಗಿ ಮಾನವ ತನ್ನ ಸಾಧನೆಯ ಪರಾಕಾಷ್ಠೆಯನ್ನು ಮುಟ್ಟಿದ್ದಾನೆ. ಜೀವನವನ್ನು ಸುಗಮವನ್ನಾಗಿಸಲು ಅತ್ಯಾವಶ್ಯಕವಾದ ಸಕಲ ವಸ್ತುಗಳನ್ನು ತಯಾರಿಸಿದ್ದಾನೆ. ಹಾಗೆಯೇ ಭೋಗ ವಿಲಾಸ ಜೀವನಕ್ಕೆ ಮಾರುಹೋಗಿ ಇಂದು ಮೂಲ ವಿಜ್ಞಾನವನ್ನೇ ಮರೆಯುವ ಹಂತಕ್ಕೆ ಮಾನವ ತಲುಪಿರುವುದು ಒಂದು ದುರಂತವೇ ಆಗಿದೆ. ಭೋಗ ಜೀವನಕ್ಕೆ ಪುಷ್ಠಿಯನ್ನು ಕೊಡುವ ತಂತ್ರಜ್ಞಾನದತ್ತ ಇಂದು ನಮ್ಮ ಒಲವಿದ್ದು ಮೂಲವಿಜ್ಞಾನದತ್ತ ನಮ್ಮ ದೃಷ್ಟಿ ಹರಿಯುತ್ತಿಲ್ಲ. ಈಗಲಾದರೂ ನಮ್ಮ ಯುವಕ ಯುವತಿಯರು ವಿಜ್ಞಾನ ಕ್ಷೇತ್ರದಲ್ಲಿ ಆಳವಾದ ಅಧ್ಯಯನ ನಡೆಸಿ ಸಂಶೋಧನಾ ಸಂಪ್ರದಾಯವನ್ನು ಮುಂದುವರಿಸುವರೆಂದು ಆಶಿಸಿ ಮುಂದೆ ಬರುವ ನೂತನ ವಿಜ್ಞಾನ ಪುಸ್ತಕಗಳಲ್ಲಿ ಅವರಿಗೆ ಯೋಚಿಸುವುದು, ಆಳವಾದ ಅಧ್ಯಯನ ಮಾಡುವುದು, ಪ್ರಯೋಗಗಳನ್ನು ಮಾಡುವುದು ಹಾಗೂ ಅವರಲ್ಲಿ ಸೃಜನಶೀಲತೆಯನ್ನು ಬೆಳೆಸುವತ್ತ ಒಲವನ್ನುಂಟುಮಾಡಲು ಅವಕಾಶಗಳನ್ನು ಕಲ್ಪಿಸಿ ಕೊಡಲಾಗಿದೆ. ಕಲಿಕೆ ಚಟುವಟಿಕೆಗಳ ಸುತ್ತಲೂ ಹೆಣೆಯುವಂತೆ ಮಾಡಲು ಪ್ರಯತ್ನಗಳು ನಡೆದಿವೆ. ಈ ವಿಚಾರದಲ್ಲಿ ಗುರುವೃಂದದವರ ಸಹಕಾರವು ಅತ್ಯಾವಶ್ಯಕ.

7 ನೇ ತರಗತಿಯ ಸಮಾಜ ವಿಜ್ಞಾನ ಪಠ್ಯಪುಸ್ತಕವು ಪಠ್ಯವಸ್ತುವಿಗೆ ಅನುಗುಣವಾಗಿ ರಚನೆಯಾಗಿದ್ದು, ಎನ್. ಸಿ. ಎಫ್. 2005 ಹಾಗೂ ಕೆ. ಸಿ. ಎಫ್. 2007 ಇವುಗಳಲ್ಲಿ ಕಂಡುಬರುವ ಎಲ್ಲಾ ಲಕ್ಷಣಗಳನ್ನು ಹೊಂದಿರುತ್ತದೆ. ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ಸ್ವಂತವಾಗಿ ಜ್ಞಾನವನ್ನು ರಚಿಸಿಕೊಳ್ಳುವ ನಿಟ್ಟಿನಲ್ಲಿ ಅನೇಕ ಚಟುವಟಿಕೆಗಳನ್ನು ಹೊಂದಿಸಲಾಗಿದೆ. ಅವುಗಳೊಂದಿಗೆ ಅನೇಕ ಪ್ರಾಜೆಕ್ಟ್‌ಗಳನ್ನು ರಚಿಸಲಾಗಿದೆ. ಆದರೆ ಕಂಠಪಾಠ ಮಾಡುವ ಅಂಶಗಳಾದ ಇಸವಿಗಳು, ಅನಾವಶ್ಯಕ ವಿಷಯಗಳು ಪುಸ್ತಕದಲ್ಲಿ ಪ್ರಾಮುಖ್ಯತೆಯನ್ನು ಪಡೆದಿಲ್ಲ.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ, ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿ ವರ್ಗದವರಿಗೆ, ಜಿಲ್ಲಾ ತರಬೇತಿ ಸಂಸ್ಥೆಗಳು, ರಾಜ್ಯ ಮಟ್ಟದ ಪಠ್ಯಪುಸ್ತಕ ಸಂಪಾದಕ ಮಂಡಳಿಯ ಸದಸ್ಯರಿಗೆ ಮತ್ತು ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ತನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಪ್ರೊ. ಜಿ. ಎಸ್. ಮುಡಂಬಡಿತ್ತಾಯ, ಮುಖ್ಯ ಸಂಯೋಜಕರು, ಪಠ್ಯವಸ್ತು ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

ನಾಗೇಂದ್ರ ಕುಮಾರ್, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ ಬೆಂಗಳೂರು.

## ಪರಸ್ಪರ

ನಿನ್ನೆ, ಇಂದು ಮತ್ತು ನಾಳೆಗಳು ಇಂದು ಈ ಕ್ಷಣದಲ್ಲಿ ಸೇರಿಕೊಂಡಿರುತ್ತವೆ ಎನ್ನುವ ವಿವೇಕವನ್ನು ಅಲ್ಲಮಪ್ರಭು ಹೇಳುತ್ತಾ ಚರಿತ್ರೆ ಎನ್ನುವುದು ಗುಪ್ತಗಾಮಿನಿಯಾಗಿ ಹರಿಯುತ್ತಿರುತ್ತದೆ. ಕೆಲವೊಮ್ಮೆ ಮೂರ್ತವಾಗಿ ಮತ್ತೆ ಕೆಲವೊಮ್ಮೆ ಅಮೂರ್ತವಾಗಿ ತನ್ನನ್ನು ಪ್ರಕಟಿಸಿಕೊಳ್ಳುತ್ತಿರುತ್ತದೆ. ಘಟನೆಗಳಾಗಿ, ವ್ಯಕ್ತಿಗಳಾಗಿ, ಮೌಲ್ಯಗಳಾಗಿ ವಿವಿದ ರೂಪಗಳಲ್ಲಿ ಕಾಣಿಸಿಕೊಳ್ಳುತ್ತದೆ. ಇಂದು ಜಗತ್ತು ಧರ್ಮ, ಬಣ್ಣ, ಲಿಂಗ, ಭಾಷೆ, ಪ್ರಾದೇಶಿಕತೆ, ಬಡವರು, ಶ್ರೀಮಂತರು ಎಂಬ ನೂರಾರು 'ಐಡೆಂಟಿಟಿ' ಗಳಲ್ಲಿ ಒಡೆದು ಹೋಗಿದೆ. ವಿವಿಧ ಆಸಕ್ತಿಗಳ ಸಂಘರ್ಷದಲ್ಲೇ ಜನರು ತಮ್ಮ ಚರಿತ್ರೆಯನ್ನು ಸೃಷ್ಟಿಸಿಕೊಳ್ಳುತ್ತಿದ್ದಾರೆ. ಹೀಗಾಗಿ ಇತಿಹಾಸವು ಕೇವಲ ಒಂದು ಸರಳ ರೇಖಾ ಮಾದರಿಯ ಬೆಳವಣಿಗೆಯಲ್ಲ. ಮನುಷ್ಯನು ಇತಿಹಾಸದ ಭಾಗವಾಗಿದ್ದುಕೊಂಡೇ ಹೊಸ ಟಿಸಿಲುಗಳನ್ನು ಸೃಷ್ಟಿಸುತ್ತಿರುತ್ತಾನೆ. ಇತಿಹಾಸವೆನ್ನುವುದು ಒಂದು ಬೆಳೆಯುತ್ತಿರುವ ಸರಪಳಿ ಇದ್ದ ಹಾಗೆ ಪ್ರತಿ ಕೊಂಡಿಯು ಒಂದು ತಲೆಮಾರು; ಮತ್ತು ತಲೆಮಾರುಗಳು ಸೃಷ್ಟಿಯಾಗುತ್ತಲೇ ಇರುತ್ತದೆ. ಗಮನಿಸಬೇಕಾದ ಬಹುಮುಖ್ಯ ಅಂಶವೆಂದರೆ ಚರಿತ್ರೆಯು ಅದರ ಸಂಚಯಿಕ ರೂಪದಲ್ಲಿ ಅತ್ಯಂತ ಸಂಕೀರ್ಣವಾದದ್ದು. ಚರಿತ್ರೆಯೆನ್ನುವುದು ಮೂಲತಃ ಒಂದು ನಿರಂತರ ಪ್ರಕ್ರಿಯೆ. ಅದನ್ನು ಅರ್ಥೈಸಿಕೊಳ್ಳಬೇಕಾದ ಬೌದ್ಧಿಕ ಶಕ್ತಿಯನ್ನು ನಾವು ನಿರಂತರ ಅಧ್ಯಯನದಿಂದ ಮಾತ್ರ ಗಳಿಸಿಕೊಳ್ಳಲು ಸಾಧ್ಯ.

ಚರಿತ್ರೆಯು ಅತ್ಯಂತ ವಿಸ್ತಾರವಾದದ್ದು. ಏಷ್ಯ, ಯೂರೋಪ್ ಮತ್ತು ಅಮೆರಿಕ ಖಂಡಗಳ ಚರಿತ್ರೆಗಳನ್ನು ಮಾತ್ರ ನಾವು ಪಠ್ಯಗಳಲ್ಲಿ ಪರಿಚಯಿಸಿಕೊಂಡಿದ್ದೇವೆ. ಆಫ್ರಿಕ, ದಕ್ಷಿಣ ಅಮೆರಿಕ, ಆಸ್ಟ್ರೇಲಿಯ ಖಂಡಗಳ ಚರಿತ್ರೆಗಳನ್ನು ಇನ್ನೂ ಸರಿಯಾಗಿ ಪರಿಚಯಿಸಿಕೊಳ್ಳಬೇಕಿದೆ. ಅಲ್ಲದೆ ಜಗತ್ತಿನಾದ್ಯಂತ ಸಂಶೋಧನೆಗಳು ಅಸಂಖ್ಯ ರೀತಿಯಲ್ಲಿ ನಡೆಯುತ್ತಿದೆ. ಅವುಗಳನ್ನು ಪಠ್ಯಕ್ರಮಗಳ ಚೌಕಟ್ಟಿಗೆ ತರುವುದು ದೊಡ್ಡ ಸವಾಲು. ಏರು ಸುರುಳಿಯ ಕ್ರಮವನ್ನು ಅನುಸರಿಸುತ್ತಿದ್ದೇವೆ ಎಂದು ಕೊಂಡರೂ ಅದು ಮತ್ತಷ್ಟು ವೈಜ್ಞಾನಿಕವಾಗಿ ರೂಪುಗೊಳ್ಳಬೇಕಿದೆ.

ಪ್ರಸ್ತುತ ಏಳನೇ ತರಗತಿಯ ಪಠ್ಯವು ಯೂರೋಪ್ ಮತ್ತು ಭಾರತದ ಚರಿತ್ರೆಗಳನ್ನು ಹೆಚ್ಚು ಒಳಗೊಂಡಿದೆ. ವಿವಿಧ ಖಂಡಗಳ ವಿಶೇಷ ಭೌಗೋಳಿಕ ಲಕ್ಷಣಗಳನ್ನು ವಿದ್ಯಾರ್ಥಿಗಳಿಗೆ ಪರಿಚಯಿಸುವ ಪ್ರಯತ್ನವನ್ನು ಮಾಡಲಾಗಿದೆ. ಭಾರತದ ಚರಿತ್ರೆಗೆ ಹೆಚ್ಚು ಅಧ್ಯಯನದ ವ್ಯಾಪ್ತಿಯನ್ನು ಒದಗಿಸಲಾಗಿದೆ. ಇತ್ತೀಚಿನ ಸಂಶೋಧನೆಗಳನ್ನು ಗಮನದಲ್ಲಿರಿಸಿಕೊಂಡು ವಿಷಯಾವಾರು ವಿವರಗಳನ್ನು ನೀಡಲಾಗಿದೆ. ಪಠ್ಯಕ್ರಮವೇ ತುಸು ಹೆಚ್ಚೆನಿಸುವುದರಿಂದ ವಿವರಗಳು ಸಹಜವಾಗಿಯೆ ಸ್ವಲ್ಪ ಹೆಚ್ಚಾಗಿ ಬಂದಿವೆ. ಈ ಹಂತದ ವಿದ್ಯಾರ್ಥಿಗಳಿಗೆ ಎಷ್ಟನ್ನು ತಿಳಿಸಬೇಕು ಎಂದು ತೀರ್ಮಾನಿಸುವುದೇ ಒಂದು ದೊಡ್ಡ ಸವಾಲಾಗಿತ್ತು.

ಈ ರಚನೆಯಾಗುವ ಸಂದರ್ಭದಲ್ಲಿ ಎದುರಾದ ಮತ್ತೊಂದು ಸವಾಲೆಂದರೆ ಧರ್ಮ, ಜಾತಿ, ಲಿಂಗ ಮುಂತಾದ ಸೂಕ್ಷ್ಮ ವಿಚಾರಗಳನ್ನು ಕುರಿತು ಹೇಗೆ ಬರೆಯಬೇಕೆಂಬುದು. ನಮ್ಮದು ಬಹುಮುಖಿ ಸಮಾಜ. ಏಳನೇ ತರಗತಿಯಲ್ಲಿ ಓದುತ್ತಿರುವ ವಿದ್ಯಾರ್ಥಿಗಳು ಅತ್ಯಂತ ಸೂಕ್ಷ್ಮಾವಸ್ಥೆಯ ಮನೋಸ್ಥಿತಿಯನ್ನು ಹೊಂದಿರುತ್ತಾರೆ. ಜನಮುಖಿ ಮತ್ತು ಸಮಾಜಮುಖಿ ಆಶಯಗಳನ್ನು ಗಮನದಲ್ಲಿಟ್ಟುಕೊಂಡು ವಿಷಯಗಳನ್ನು ತಿಳಿಸುವ ಪ್ರಯತ್ನವನ್ನು ಈ ಪಠ್ಯದಲ್ಲಿ ಮಾಡಲಾಗಿದೆ.

ಶಿಕ್ಷಕರ ಗಮನಕ್ಕೆ ತಪ್ಪದೆ ತರಬೇಕಾದ ಕೆಲವು ಅಂಶಗಳನ್ನು ನಾವಿಲ್ಲಿ ಹಂಚಿಕೊಳ್ಳುತ್ತಿದ್ದೇವೆ.

1. 7 ನೆಯ ತರಗತಿಯ ಪಠ್ಯಪುಸ್ತಕದ ಪಠ್ಯವಸ್ತು 5 ಮತ್ತು 6 ನೇ ತರಗತಿಯ ಪಠ್ಯವಸ್ತುವಿನ ಮುಂದುವರಿದ ಭಗವಾಗಿದೆ. ಆದ್ದರಿಂದ ಶಿಕ್ಷಕರು ಹಿಂದಿನ ತರಗತಿಗಳ ಪಠ್ಯವಸ್ತುವನ್ನು ಅರಿಯುವುದು ಸೂಕ್ತವೇ ಆಗಿದೆ.
2. ಪಾಠದ ಪ್ರಾರಂಭ ಮತ್ತು ಕೊನೆಯನ್ನು ಐಕಾನಗಳ ಮೂಲಕ ಸೂಚಿಸಿದೆ. ಲಿಖಿತ ಮೌಲ್ಯಮಾಪನ ಮಾಡುವ ಸಂದರ್ಭದಲ್ಲಿ ಈ ಚೌಕಟ್ಟು ಮೀರದಿರಲಿ. ಬಾಕ್ಸ್ ಗಳಲ್ಲಿ ನೀಡಲಾದ ಹೆಚ್ಚಿನ ಮಾಹಿತಿಯನ್ನು ಕುರಿತಾದ ಪ್ರಶ್ನೆಗಳನ್ನು ಲಿಖಿತ ಪರೀಕ್ಷೆಯಲ್ಲಿ ಕೇಳಬಾರದಾಗಿಯೂ ವಿನಂತಿ.
3. ಪಾಠದ ಪ್ರಾರಂಭದಲ್ಲಿ ಪಾಠದ ಪರಿಚಯ ಮತ್ತು ಸಾಮರ್ಥ್ಯಗಳನ್ನು ಶಿಕ್ಷಕರ ಮಾರ್ಗದರ್ಶಕ್ಕಾಗಿ ಮಾತ್ರವೇ ನೀಡಲಾಗಿದೆ. ಅವನ್ನು ಶಿಕ್ಷಕರು ಅಂತರ್ಗತಗೊಳಿಸಿಕೊಳ್ಳಬೇಕೆಂಬುದು ನಮ್ಮ ಆಶಯ.
4. ಪಠ್ಯಪುಸ್ತಕದ ಉತ್ತಮ ಅಂಶಗಳು ಮತ್ತು ಕೊರತೆಗಳನ್ನು ಶಿಕ್ಷಕರು ಕರ್ನಾಟಕ ಪಠ್ಯಪುಸ್ತಕ ಸಂಘದ ಮುಖ್ಯ ಸಂಯೋಜಕರಿಗೆ ತಿಳಿಸುವ ಪರಿಪಾಠವನ್ನು ಸ್ವಾಗತಿಸುತ್ತೇವೆ. ಪಠ್ಯಪುಸ್ತಕ ಪರಿಷ್ಕರಣೆಯ ಹಂತದಲ್ಲಿ ಶಿಕ್ಷಕರ ಸೂಕ್ತ ಸಲಹೆಗಳನ್ನು ಅಳವಡಿಸಲಾಗುವುದು. ಪೋಷಕರೂ ಈ ಕಾರ್ಯದಲ್ಲಿ ಭಾಗವಹಿಸುವುದಾದರೆ ಅದನ್ನು ಸ್ವಾಗತಿಸುತ್ತೇವೆ.
5. ಸದರಿ ಪಠ್ಯಪುಸ್ತಕವನ್ನು ರೂಪುಗೊಳಿಸಲು ಸಹಕರಿಸಿದ ಎಲ್ಲರಿಗೂ ವಂದನೆಗಳು.

ಡಾ. ಅಶ್ವತ್ಥನಾರಾಯಣ, ಅಧ್ಯಕ್ಷರು, ಪಠ್ಯಪುಸ್ತಕ ರಚನಾ ಸಮಿತಿ

## ಪಠ್ಯಪುಸ್ತಕ ರಚನಾ ಸಮಿತಿ

ಅಧ್ಯಕ್ಷರು: ಡಾ. ಅಶ್ವತ್ಥನಾರಾಯಣ, ಅಸೋಸಿಯೇಟ್ ಪ್ರೊಫೆಸರ್, ಇತಿಹಾಸ ವಿಭಾಗ, ಜ್ಞಾನಭಾರತಿ ಕ್ಯಾಂಪಸ್, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು-560056.

ಸದಸ್ಯರು: ಶ್ರೀ ಎಂ. ಎನ್. ಕಟ್ಟಿ, ಭೂಗೋಳ ಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಬಿ ಪಿ ವಾಡಿಯಾ ರಸ್ತೆ, ಬಸವನಗುಡಿ, ಬೆಂಗಳೂರು- 560026.

ಶ್ರೀ ಎನ್. ನಿಂಗರಾಜು, ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಯಲಹಂಕ, ಬೆಂಗಳೂರು.

ಶ್ರೀ ವೈ. ರಾಮಕೃಷ್ಣರಾವ್, ರಾಜ್ಯಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಎರ್ಮಾಳು ಬಡ ಅಂಚೆ, ಉಡುಪಿ ಜಿಲ್ಲೆ- 574119.

ಶ್ರೀ ಎಸ್. ಬಿ. ಕಡಕೋಳದವರ, ಸಹಶಿಕ್ಷಕರು, ವಿದ್ಯಾರಣ್ಯ ಪಿ. ಯು. ಕಾಲೇಜು, ಪ್ರೌಢಶಾಲಾ ವಿಭಾಗ, ಧಾರವಾಡ

ಶ್ರೀಮತಿ ಕೆ. ವಿ. ಶಿಲ್ಪ, ಸಹಶಿಕ್ಷಕರು, ಹಿರಿಯ ಪ್ರಾಥಮಿಕ ಶಾಲೆ, ಚನ್ನಯ್ಯನ ಕೋಟೆ, ವಿರಾಜ ಪೇಟೆ ತಾಲ್ಲೂಕು, ಮಡಿಕೇರಿ ಜಿಲ್ಲೆ.

ಚಿತ್ರ ಕಲಾವಿದರು: ಶ್ರೀ ತಾರಾನಾಥ ಕೈರಂಗಳ್, ಚಿತ್ರಕಲಾ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಮಂಚಿ ಕೊಳ್ನಾಡು, ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ.

ಪರಿಶೀಲಕರು: ಶ್ರೀ ಎಂ. ರಾಘವೇಂದ್ರ ಪ್ರಭು, ಇತಿಹಾಸ ಪ್ರೊಫೆಸರ್ (ನಿವೃತ್ತ), ಅನಂತ ಪ್ರಸಾದ, ದಂಬೆಲ್, ಅಶೋಕನಗರ ಅಂಚೆ, ಮಂಗಳೂರು- 575006.

ಶ್ರೀ ಕೆ. ಆರ್. ಮಂಜುನಾಥ್, ಪ್ರಾಂಶುಪಾಲರು, ಎಮ್ ಇ ಎಸ್ ಪದವಿಪೂರ್ವ ಕಾಲೇಜು, ಬಿ ಟಿ ಎಮ್ ಲೇಔಟ್, ಬೆಂಗಳೂರು.

ಸಂಪಾದಕ ಮಂಡಳಿ: ಡಾ. ಎಂ. ವಿ. ಶ್ರೀನಿವಾಸ್, ಇತಿಹಾಸ ಪ್ರೊಫೆಸರ್ (ನಿವೃತ್ತ), ಹೆಚ್. ರಸ್ತೆ, ರಾಜರಾಜೇಶ್ವರಿ ನಗರ, ಬೆಂಗಳೂರು.

ಡಾ. ಆರ್. ಎಲ್. ಎಂ. ಪಾಟೀಲ್, ರಾಜ್ಯಶಾಸ್ತ್ರ ಪ್ರೊಫೆಸರ್ (ನಿವೃತ್ತ), 1105, ಪೂರ್ಣಪ್ರಜ್ಞಾನಗರ, ಉತ್ತರ ಹಳ್ಳಿ, ಬೆಂಗಳೂರು.

ಡಾ. ಈಶ್ವರಪ್ಪ ಭೂಗೋಳಶಾಸ್ತ್ರ ವಿಭಾಗದ ಮುಖ್ಯಸ್ಥರು, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು.

ಮುಖ್ಯ ಸಂಯೋಜಕರು: ಪ್ರೊ. ಜಿ. ಎಸ್, ಮುಡಂಬಡಿತ್ತಾಯ, ಸಂಯೋಜಕರು, ಪಠ್ಯವಸ್ತು ಪರಿಷ್ಕರಣೆ ಮತ್ತು ಪಠ್ಯಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

ಸಲಹೆ ಮತ್ತು ಮಾರ್ಗದರ್ಶನ: ಶ್ರೀ ನಾಗೇಂದ್ರ ಕುಮಾರ್, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

ಶ್ರೀಮತಿ ಸಿ. ನಾಗಮಣಿ, ಉಪ ನಿರ್ದೇಶಕರು (ಪ್ರಭಾರಿ), ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

ಕಾರ್ಯಕ್ರಮ ಸಂಯೋಜಕರು: ಶ್ರೀಮತಿ ಎಸ್. ಎನ್. ಲೀಲಾವತಿ, ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

## ಪಠ್ಯಪುಸ್ತಕ ಪರಿಷ್ಕರಣ ಸಮಿತಿಗಳ ವಿವರ

ಸರ್ವಾಧ್ಯಕ್ಷರು: ಪ್ರೊ. ಬರಗೂರು ರಾಮಚಂದ್ರಪ್ಪ, ರಾಜ್ಯ ಪಠ್ಯಪುಸ್ತಕ ಪರಿಷ್ಕರಣ ಸಮಿತಿ, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು.

## ಪರಿಷ್ಕರಣ ಸಮಿತಿ

ಅಧ್ಯಕ್ಷರು: ಡಾ. ಟಿ. ಆರ್. ಚಂದ್ರಶೇಖರ್, ಸಮಾಲೋಚಕರು, 4 ನೇ ಹಣಕಾಸು ಆಯೋಗ, 3 ನೇ ಮಹಡಿ, ಖನಿಜ ಭವನ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು- 01.

ಸದಸ್ಯರು: ಡಾ. ಬಸವರಾಜ್, ಸಹಪ್ರಾಧ್ಯಾಪಕರು, ರಾಜ್ಯಶಾಸ್ತ್ರ, ತುಮಕೂರು ವಿಶ್ವವಿದ್ಯಾಲಯ, ತುಮಕೂರು.

ಡಾ. ಎನ್. ಆರ್. ಹಡಪದ, ಭೂಗೋಳಶಾಸ್ತ್ರ ಉಪನ್ಯಾಸಕರು, ಶ್ರೀ ಚನ್ನಬಸವೇಶ್ವರ ಪದವಿ ಪೂರ್ವ ಕಾಲೇಜು, ಬಿ. ಅರಳೀಕಟ್ಟಿ ಹುಬ್ಬಳ್ಳಿ ತಾ, ಧಾರವಾಡ ಜಿಲ್ಲೆ.

ಶ್ರೀ. ಹಂ. ಗು. ರಾಜೇಶ್ ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ದೊಡ್ಡೇರಿ, ಬೆಂಗಳೂರು ದಕ್ಷಿಣ ತಾ. ಬೆಂಗಳೂರು- 562130.

ಶ್ರೀ. ಪಿ. ಎಂ. ಕಾಗೀನಕರ್ ಸಹ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಚಂಗವಾರ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ.

ಶ್ರೀಮತಿ. ರಾಜಲಕ್ಷ್ಮಿ ಎಸ್, ಸಹ ಶಿಕ್ಷಕರು, ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌಢ ವಿಭಾಗ) ಶ್ರೀರಾಂಪುರಂ, ಬೆಂಗಳೂರು, ಉತ್ತರ ವಲಯ- 2, ಬೆಂಗಳೂರು ಉತ್ತರ ಜಿಲ್ಲೆ.

ಶ್ರೀಮತಿ. ಶಾಹಿನಾ ಬೇಗಂ, ಸಹ ಶಿಕ್ಷಕರು, ಸ್ತ್ರೀಸಮಾಜ, ಶೇಷಾದ್ರಿಪುರಂ ಪ್ರೌಢಶಾಲೆ, ಬೆಂಗಳೂರು ಉತ್ತರ ವಲಯ- 2, ಬೆಂಗಳೂರು ಉತ್ತರ ಜಿಲ್ಲೆ.

ಕಲಾವಿದರು: ಶ್ರೀ. ಡಿ. ಎನ್. ವೆಂಕಟೇಶ್, ಚಿತ್ರಕಲಾ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಉರಮಾರ ಕಸಲಗೆರೆ, ಮಂಡ್ಯ ಜಿಲ್ಲೆ.

## ಉನ್ನತ ಪರಿಶೀಲನ ಸಮಿತಿ

ಡಾ. ಎಂ. ಎಸ್. ತಳವಾರ್, ನಂ 777, 'ಜೇನುಗೂಡು', 5 ನೇ ಬ್ಲಾಕ್, ಬನಶಂಕರಿ 6 ನೇ ಘಟ್ಟ, ಮೆಟ್‌ಕಲ್ ಪಾಳ್ಯ, ಬೆಂಗಳೂರು- 60.

ಡಾ. ಅಮರೇಶ ಯತಗಲ್, ಸಹಾಯಕ ಪ್ರಾಧ್ಯಾಪಕರು, ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ, ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ಸ್ನಾತಕೋತ್ತರ ಕೇಂದ್ರ, ತೊರವಿ, ವಿಜಯಪುರ- 586105.

ಡಾ. ನಂದೀಶ್ವರ, ಪ್ರಾಂಶುಪಾಲರು, ಎಸ್. ಎಂ. ಆರ್. ಪಿ. ಯು. ಕಾಲೇಜು, ಕಳ್ಳಂಬೆಳ್ಳ, ಸಿರಾ ತಾಲ್ಲೂಕು, ತುಮಕೂರು ಜಿಲ್ಲೆ- 572125.

ಶ್ರೀ. ಮಂಜುನಾಥ ಐಲಿ, ಇತಿಹಾಸ ಉಪನ್ಯಾಸಕರು, ಸರಕಾರಿ ಪದವಿ ಪೂರ್ವ ಕಾಲೇಜು, ಪೋಲಿಸ್ ಕಾಲೋನಿ, ರಾಯಚೂರು- 584101.

ಸಲಹೆ ಮತ್ತು ಮಾರ್ಗದರ್ಶನ: ಶ್ರೀ. ನರಸಿಂಹಯ್ಯ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು.

ಶ್ರೀಮತಿ. ಸಿ. ನಾಗಮಣಿ ಉಪ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು.

ಕಾರ್ಯಕ್ರಮ ಸಂಯೋಜಕರು: ಶ್ರೀಮತಿ. ಎಸ್. ಎನ್. ಲೀಲಾವತಿ ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು.

## ಪರಿಷ್ಕರಣೆ ಕುರಿತು.

ಒಂದರಿಂದ ಹತ್ತನೇ ತರಗತಿಯ ಪಠ್ಯಪುಸ್ತಕಗಳ ಬಗ್ಗೆ ಪ್ರಕಟಗೊಂಡ ಸಾರ್ವಜನಿಕ ಅಭಿಪ್ರಾಯಗಳನ್ನು ಗಮನಿಸಿ ಮಾನ್ಯ ಮುಖ್ಯಮಂತ್ರಿಯವರೂ ಅರ್ಥಸಚಿವರೂ ಆಗಿರುವ ಶ್ರೀ ಸಿದ್ಧರಾಮಯ್ಯನವರು ತಮ್ಮ 2014-15ರ ಬಜೆಟ್‌ನಲ್ಲಿ ತಜ್ಞರ ಸಮಿತಿಯನ್ನು ರಚಿಸುವ ಘೋಷಣೆ ಮಾಡಿದರು. ತಜ್ಞರು ಅನುಸರಿಸಬೇಕಾದ ಮೂಲ ಆಶಯವನ್ನು ಹೀಗೆ ಹೇಳಿದರು: "ಪಠ್ಯಪುಸ್ತಕಗಳನ್ನು ಸಾಮಾಜಿಕ ಸಾಮರಸ್ಯ, ನೈತಿಕಮೌಲ್ಯಗಳು, ವ್ಯಕ್ತಿತ್ವ ವಿಕಸನ, ವೈಜ್ಞಾನಿಕ ಮತ್ತು ವೈಚಾರಿಕ ಮನೋಭಾವ, ಜಾತ್ಯತೀತತೆ ಮತ್ತು ರಾಷ್ಟ್ರೀಯ ಬದ್ಧತೆಗಳಿಗೆ ಅನುವಾಗುವಂತೆ ತಜ್ಞರ ಸಮಿತಿಯನ್ನು ಪುನರ್ ರಚಿಸಲಾಗುವುದು" ಇದು ಬಜೆಟ್ ಭಾಷಣದಲ್ಲಿ ಸಾದರಪಡಿಸಿದ ಆಶಯ.

ಆನಂತರ ಶಿಕ್ಷಣ ಇಲಾಖೆಯು ಒಂದರಿಂದ ಹತ್ತನೇ ತರಗತಿಯವರೆಗಿನ ಪಠ್ಯಪುಸ್ತಕಗಳ ಪರಿಷ್ಕರಣೆಗಾಗಿ 27 ಸಮಿತಿಗಳನ್ನು ರಚಿಸಿ ದಿನಾಂಕ: 24,11,2014 ರಂದು ಆದೇಶಹೊರಡಿಸಿತು. ಈ ಸಮಿತಿಗಳು ವಿಷಯವಾರು ಮತ್ತು ತರಗತಿವಾರು ಮಾನದಂಡಕ್ಕನುಗುಣವಾಗಿ ರಚಿತವಾದವು. ವಿವಿಧ ಪಠ್ಯವಿಷಯಗಳಿಗೆ ಸಂಬಂಧಿಸಿದ ತಜ್ಞರು, ಅಧ್ಯಾಪಕರು ಈ ಸಮಿತಿಗಳಲ್ಲಿದ್ದಾರೆ. ಈಗಾಗಲೇ ಲಿಖಿತವಾಗಿ ಬಂದಿರುವ ಅನೇಕ ಆಕ್ಷೇಪಗಳು ಮತ್ತು ವಿಶ್ಲೇಷಣೆಗಳನ್ನು ಪರಿಶೀಲಿಸಿ, ತಪ್ಪು ಒಪ್ಪುಗಳ ಬಗ್ಗೆ ನಿರ್ಣಯಿಸಿ ಪಠ್ಯಪುಸ್ತಕಗಳನ್ನು ಪರಿಷ್ಕರಿಸುವ ಹೊಣೆಹೊತ್ತ ಈ ಸಮಿತಿಗಳಿಗೆ 'ಅಗತ್ಯವಿದ್ದಲ್ಲಿ ಪಠ್ಯವಸ್ತುವನ್ನು ಪರಿಷ್ಕರಿಸಿ ನಂತರ ಪಠ್ಯಪುಸ್ತಕಗಳನ್ನು ಪರಿಷ್ಕರಿಸುವ' ಸ್ವಾತಂತ್ರ್ಯವನ್ನು 24,11,2014ರ ಆದೇಶದಲ್ಲೇ ನೀಡಲಾಗಿತ್ತು. ಆನಂತರ 19,09,2015 ರಂದು ಹೊಸ ಆದೇಶ ಹೊರಡಿಸಿ 'ಅಗತ್ಯವಿದ್ದಲ್ಲಿ ಪುನರ್ ರಚಿಸುವ' ಸ್ವಾತಂತ್ರ್ಯವನ್ನು ನೀಡಲಾಯಿತು. ಹೀಗೆ ಸಮಗ್ರ ಪರಿಷ್ಕರಣೆಗೊಂಡ ಪಠ್ಯಪುಸ್ತಕಗಳನ್ನು 2016-17 ರ ಬದಲು 2017-18 ನೇ ಶೈಕ್ಷಣಿಕ ವರ್ಷದಲ್ಲಿ ಜಾರಿಗೊಳಿಸಲಾಗುವುದೆಂದು ಇದೇ ಆದೇಶದಲ್ಲಿ ತಿಳಿಸಲಾಯಿತು.

ಅನೇಕ ವ್ಯಕ್ತಿಗಳೂ ಸಂಘಟನೆಗಳೂ ಸ್ವಯಂಪ್ರೇರಿತರಾಗಿ ಪಠ್ಯಪುಸ್ತಕಗಳ ಮಾಹಿತಿದೋಷ, ಆಶಯದೋಷಗಳನ್ನು ಪಟ್ಟಿಮಾಡಿ ಶಿಕ್ಷಣ ಸಚಿವರಿಗೆ, ಪಠ್ಯಪುಸ್ತಕ ಸಂಘಕ್ಕೆ ಕಳುಹಿಸಿದ್ದರು. ಅವುಗಳ ಪರಿಶೀಲನೆಮಾಡಿದ್ದಲ್ಲದೆ, ಸಮಿತಿಗಳಾಚೆಗೆ ಅನೇಕ ಸಂವಾದಗಳನ್ನು ಏರ್ಪಡಿಸಿ ವಿಚಾರ ವಿನಿಮಯ ಮಾಡಿಕೊಂಡಿದ್ದೇವೆ. ಪ್ರಾಥಮಿಕ ಮತ್ತು ಪ್ರೌಢಶಾಲಾ ಅಧ್ಯಾಪಕರ ಸಂಘಗಳ ಜೊತೆ ಚರ್ಚಿಸಿದ್ದಲ್ಲದೆ ಪ್ರಶ್ನಾವಳಿ ಸಿದ್ಧಪಡಿಸಿ ಅಧ್ಯಾಪಕರಿಗೆ ಕಳಿಸಿ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ. ಅಧ್ಯಾಪಕರು, ವಿಷಯ ಪರಿವೀಕ್ಷಕರು ಮತ್ತು ಡಯಟ್ ಪ್ರಾಂಶುಪಾಲರ ಪ್ರತ್ಯೇಕ ಸಭೆಗಳನ್ನು ನಡೆಸಿ ವಿಶ್ಲೇಷಣಾತ್ಮಕ ಅಭಿಮತಗಳನ್ನು ಪಡೆಯಲಾಗಿದೆ. ವಿಜ್ಞಾನ, ಸಮಾಜವಿಜ್ಞಾನ, ಗಣಿತ, ಭಾಷೆ ಸಾಹಿತ್ಯಗಳಿಗೆ ಸಂಬಂಧಿಸಿದ ತಜ್ಞರಿಗೆ ಮೊದಲೇ ಪಠ್ಯಪುಸ್ತಕಗಳನ್ನು ಕಳುಹಿಸಿ ಆನಂತರ ಸಭೆ ನಡೆಸಿ ಚರ್ಚಿಸಲಾಗಿದೆ. ಮಹಿಳಾ ಸಂಘಟನೆ ಹಾಗೂ ವಿಜ್ಞಾನ ಸಂಬಂಧಿ ಸಂಸ್ಥೆಗಳನ್ನು ಆಹ್ವಾನಿಸಿ ಚಿಂತನೆ ನಡೆಸಲಾಗಿದೆ. ಹೀಗೆ ಎಲ್ಲಾ ಮೂಲಗಳಿಂದ ಪಡೆದ ಅರಿವಿನ ಆಧಾರದ ಮೇಲೆ ಪಠ್ಯಪುಸ್ತಕಗಳನ್ನು ಅಗತ್ಯವಿದ್ದ ಕಡೆ ಪರಿಷ್ಕರಿಸಲಾಗಿದೆ.

ಬಹುಮುಖ್ಯವಾದ ಇನ್ನೊಂದು ಸಂಗತಿಯನ್ನು ಇಲ್ಲಿ ಹೇಳಬೇಕು. ಕೇಂದ್ರೀಯ ಶಾಲಾ (ಎನ್. ಸಿ. ಇ. ಆರ್. ಟಿ) ಪಠ್ಯಪುಸ್ತಕಗಳ ಜೊತೆ ರಾಜ್ಯದ ಪಠ್ಯ ಪುಸ್ತಕಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿ ಸಲಹೆಗಳನ್ನು ನೀಡಲು ವಿಜ್ಞಾನ, ಗಣಿತ ಮತ್ತು ಸಮಾಜವಿಜ್ಞಾನಕ್ಕೆ ಸಂಬಂಧಿಸಿದಂತೆ ತಜ್ಞರ ಮೂರು ಸಮಿತಿಗಳನ್ನು ರಚಿಸಲಾಯಿತು. ಈ ಸಮಿತಿಗಳು ನೀಡಿದ ತೌಲನಿಕ ವಿಶ್ಲೇಷಣೆ ಮತ್ತು ಸಲಹೆಗಳನ್ನು ಆಧರಿಸಿ ರಾಜ್ಯ ಪಠ್ಯಪುಸ್ತಕಗಳ ಗುಣಮಟ್ಟವನ್ನು ಹೆಚ್ಚಿಸಲಾಗಿದೆ. ಕೇಂದ್ರೀಯ ಶಾಲಾ ಪಠ್ಯಪುಸ್ತಕಗಳಿಗಿಂತ ನಮ್ಮ ರಾಜ್ಯದ ಪಠ್ಯಪುಸ್ತಕಗಳ ಗುಣಮಟ್ಟ ಕಡಿಮೆಯಾಗದಂತೆ ಕಾಯ್ದುಕೊಳ್ಳಲಾಗಿದೆ. ಜೊತೆಗೆ ಆಂಧ್ರ, ತಮಿಳುನಾಡು, ಮಹಾರಾಷ್ಟ್ರ ರಾಜ್ಯಗಳ ಪಠ್ಯಪುಸ್ತಕಗಳ ಜೊತೆ ನಮ್ಮ ಪಠ್ಯಪುಸ್ತಕಗಳನ್ನು ಪರಿಶೀಲಿಸಲಾಗಿದೆ.

ಇನ್ನೊಂದು ಸ್ಪಷ್ಟನೆಯನ್ನು ನೀಡಲು ಬಯಸುತ್ತೇನೆ. ನಮ್ಮ ಸಮಿತಿಗಳು ಮಾಡಿರುವುದು ಪರಿಷ್ಕರಣೆಯೇ ಹೊರತು ಪಠ್ಯಪುಸ್ತಕಗಳ ಸಮಗ್ರ ರಚನೆಯಲ್ಲ. ಆದ್ದರಿಂದ ಈಗಾಗಲೇ ರಚಿತವಾಗಿರುವ ಪಠ್ಯಪುಸ್ತಕಗಳ ಸ್ವರೂಪಕ್ಕೆ ಎಲ್ಲಿಯೂ ಧಕ್ಕೆಯುಂಟುಮಾಡಿಲ್ಲ. ಲಿಂಗತ್ವ ಸಮಾನತೆ, ಪ್ರಾದೇಶಿಕ ಪ್ರಾತಿನಿಧ್ಯ, ರಾಷ್ಟ್ರೀಯ ಸಮಗ್ರತೆ, ಸಮಾನತೆ, ಸಾಮಾಜಿಕ ಸಾಮರಸ್ಯಗಳ ಹಿನ್ನೆಲೆಯಲ್ಲಿ ಕೆಲವು ಪರಿಷ್ಕರಣೆಗಳು ನಡೆದಿವೆ. ಹೀಗೆ ಪರಿಷ್ಕರಿಸುವಾಗ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಮತ್ತು ರಾಜ್ಯ ಪಠ್ಯಕ್ರಮ ಚೌಕಟ್ಟುಗಳನ್ನು ಮೀರಿಲ್ಲವೆಂದು ತಿಳಿಸಬಯಸುತ್ತೇವೆ. ಜೊತೆಗೆ ನಮ್ಮ ಸಂವಿಧಾನದ ಆಶಯಗಳನ್ನು ಅನುಸರಿಸಲಾಗಿದೆ. ಸಮಿತಿಗಳು ಮಾಡಿದ ಪರಿಷ್ಕರಣೆಯನ್ನು ಮತ್ತೊಮ್ಮೆ ಪರಿಶೀಲಿಸಲು ವಿಷಯವಾರು ಉನ್ನತ ಪರಿಶೀಲನ ಸಮಿತಿಗಳನ್ನು ರಚಿಸಿ ಅಭಿಪ್ರಾಯ ಪಡೆದು ಅಳವಡಿಸಲಾಗಿದೆ.

ಹೀಗೆ ಕ್ರಮಬದ್ಧವಾಗಿ ನಡೆದ ಕೆಲಸಕ್ಕೆ ತಮ್ಮನ್ನು ತಾವು ಸಂಪೂರ್ಣ ತೊಡಗಿಸಿಕೊಂಡ 27 ಸಮಿತಿಗಳ ಅಧ್ಯಕ್ಷರು ಮತ್ತು ಸದಸ್ಯರನ್ನು ಹಾಗೂ ಉನ್ನತ ಪರಿಶೀಲನಾ ಸಮಿತಿಯ ಸಮಸ್ತರನ್ನು ಕೃತಜ್ಞತೆಯಿಂದ ನೆನೆಯುತ್ತೇವೆ. ಅಂತೆಯೇ ಸಮಿತಿಗಳ ಕೆಲಸ ಸುಗಮವಾಗಿ ನಡೆಯುವಂತೆ ವ್ಯವಸ್ಥೆ ಮಾಡಲು ಕಾರ್ಯಕ್ರಮ ಅಧಿಕಾರಿಗಳಾಗಿ ನಿಷ್ಠೆಯಿಂದ ದುಡಿದ ಪಠ್ಯಪುಸ್ತಕ ಸಂಘದ ಎಲ್ಲಾ ಅಧಿಕಾರಿಗಳನ್ನೂ ನೆನೆಯುತ್ತೇವೆ. ಸಹಕರಿಸಿದ ಸಿಬ್ಬಂದಿಗೂ ನಮ್ಮ ವಂದನೆಗಳು. ಅಭಿಪ್ರಾಯ ನೀಡಿ ಸಹಕರಿಸಿದ ಸರ್ವ ಸಂಘಟನೆಗಳು ಮತ್ತು ತಜ್ಞರಿಗೆ ಧನ್ಯವಾದಗಳು.

ನರಸಿಂಹಯ್ಯ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ), ಬೆಂಗಳೂರು-85.

ಪ್ರೊ. ಬರಗೂರು ರಾಮಚಂದ್ರಪ್ಪ, ಸರ್ವಾಧ್ಯಕ್ಷರು, ರಾಜ್ಯ ಪಠ್ಯಪುಸ್ತಕ ಪರಿಷ್ಕರಣ ಸಮಿತಿ, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ), ಬೆಂಗಳೂರು- 85.

## ಪರಿವಿಡಿ

| ಕ್ರಮ ಸಂಖ್ಯೆ | ಇತಿಹಾಸ |
|---|---|
| 1. | ವಿಜಯನಗರದ ಅರಸು ಮನೆತನಗಳು |
| 2. | ಬಹಮನಿ ಆದಿಲ್ ಷಾಹಿಗಳು |
| 3. | ಭಕ್ತಿ ಪಂಥ ಹಾಗೂ ಸೂಫಿ ಪರಂಪರೆ |
| 4. | ನಾಯಕರು, ಪಾಳೆಯಗಾರರು ಮತ್ತು ನಾಡ ಪ್ರಭುಗಳು |
| 5. | ಮೈಸೂರು ಒಡೆಯರು |
| 6. | ದಿಲ್ಲಿಯ ಸುಲ್ತಾನರು |
| 7. | ಮೊಗಲರು |
| 8. | ಮರಾಠರು |
| 9. | ಭಾರತಕ್ಕೆ ಯುರೋಪಿಯನ್ನರ ಆಗಮನ |
| 10. | ಭಾರತದಲ್ಲಿ ಬ್ರಿಟಿಷರ ರಾಜಕೀಯ ಏಳಿಗೆ |
| 11. | ಬ್ರಿಟಿಷ್ ಆಳ್ವಿಕೆಯ ಪರಿಣಾಮ |
| 12. | ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆ |
| 13. | ಸ್ವಾತಂತ್ರ್ಯ ಹೋರಾಟಗಳು |

# ಪಾಠ-1: ವಿಜಯನಗರದ ಅರಸು ಮನೆತನಗಳು

## ಪಾಠದ ಪರಿಚಯ

13 ನೇ ಶತಮಾನದಲ್ಲಿ ದೆಹಲಿ ಸುಲ್ತಾನ ಅಲ್ಲಾವುದ್ದೀನ್ ಖಿಲ್ಜಿಯಿಂದ ಪ್ರಾರಂಭವಾದ ದಕ್ಷಿಣ ಭಾರತ ದಂಡಯಾತ್ರೆಗಳು 14 ನೇ ಶತಮಾನದಲ್ಲಿಯೂ ಮುಂದುವರೆದವು. ಇದರಿಂದ ದಕ್ಷಿಣ ಭಾರತಲ್ಲಿದ್ದ ದೇವಗಿರಿಯ ಯಾದವರು, ದ್ವಾರಸಮುದ್ರದ ಹೊಯ್ಸಳರು, ವಾರಂಗಲ್ಲಿನ ಕಾಕತೀಯರು, ಮಧುರೈ ಪಾಂಡ್ಯರು ಮುಂತಾದ ಮನೆತನಗಳ ಆಳ್ವಿಕೆಯು ಅವಸಾನದೆಡೆಗೆ ಸಾಗಿತು. ಇಂತಹ ಸಂದರ್ಭದಲ್ಲಿ ದಕ್ಷಿಣ ಭಾರತದಲ್ಲಿ ಉದ್ಭವಿಸಿದ ರಾಜಕೀಯ ಬಿಕ್ಕಟ್ಟಿಗೆ ಪರಿಹಾರವಾಗಿ ಪ್ರಬಲ ರಾಜಕೀಯ ಶಕ್ತಿಯೊಂದನ್ನು ರೂಪಿಸುವಲ್ಲಿ ವಿಜಯನಗರವು ಯಶಸ್ವಿಯಾಯಿತು. ಇದು ಮೂರು ಶತಮಾನಗಳ ಕಾಲ ಸದೃಢವಾಗಿ ಮೆರೆಯಿತು.

ಈ ಪಾಠದಲ್ಲಿ ವಿಜಯನಗರ ಸಾಮ್ರಾಜ್ಯವನ್ನಾಳಿದ ವಿವಿಧ ವಂಶಗಳ ಪ್ರಮುಖ ಅರಸರುಗಳ ಕುರಿತು ವಿವರಿಸಲಾಗಿದೆ. ಈ ಅರಸರು ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ಕ್ಷೇತ್ರಗಳಿಗೆ ನೀಡಿದ ಕೊಡುಗೆಗಳನ್ನು ಚರ್ಚಿಸಲಾಗಿದೆ. ಅಲ್ಲದೆ ಈ ಮನೆತನದ ಅವನತಿಗೆ ಕಾರಣವಾದ ತಾಳಿಕೋಟೆ (ರಕ್ಕಸತಂಗಡಿ) ಯುದ್ಧ ಹಾಗೂ ಅದರ ಪರಿಣಾಮಗಳನ್ನು ಇಲ್ಲಿ ವಿವರಿಸಲಾಗಿದೆ.

## ಸಾಮರ್ಥ್ಯಗಳು

1. ವಿಜಯನಗರ ಅರಸರ ಸಾಧನೆಗಳನ್ನು ಅರ್ಥಮಾಡಿಕೊಳ್ಳುವುದು.
2. ವಿಜಯನಗರ ಕಾಲದ ಆಡಳಿತ, ಸಾಮಾಜಿಕ ಸ್ಥಿತಿ, ಆರ್ಥಿಕ ಸ್ಥಿತಿ, ಸಾಹಿತ್ಯ ಮುಂತಾದವುಗಳನ್ನು ಅರಿಯುವುದು.
3. ವಿಜಯನಗರ ಕಾಲದ ಕಲೆ ವಾಸ್ತುಶಿಲ್ಪಗಳ ಸ್ವರೂಪವನ್ನು ಅರಿತುಕೊಳ್ಳುವುದು.
4. ವಿಜಯನಗರ ಅರಸರು ಅನುಸರಿಸಿದ ಧರ್ಮ ಸಮನ್ವಯತೆಯನ್ನು ತಿಳಿದುಕೊಳ್ಳುವುದು.
5. ಭೂಪಟದಲ್ಲಿ ವಿಜಯನಗರ ಸಾಮ್ರಾಜ್ಯದ ಎಲ್ಲೆಗಳನ್ನು ಹಾಗೂ ಪ್ರಮುಖ ಸ್ಥಳಗಳನ್ನು ಗುರುತಿಸುವುದು.

ವಿಜಯನಗರ ಸಾಮ್ರಾಜ್ಯವು ಸಂಗಮನ ಪುತ್ರರಾದ ಹರಿಹರ, ಬುಕ್ಕರಾಯ, ಕಂಪಣ, ಮಾರಪ್ಪ ಮತ್ತು ಮುದ್ದಪ್ಪರಿಂದ ಸಾ. ಶ 1336 ರಲ್ಲಿ ತುಂಗಭದ್ರಾ ನದಿಯ ದಕ್ಷಿಣ ದಡದ ಮೇಲೆ ಸ್ಥಾಪಿಸಲ್ಪಟ್ಟಿತು. ಬಳ್ಳಾರಿ ಜಿಲ್ಲೆಯ ಹಂಪೆಯು ಇವರ ರಾಜಧಾನಿಯಾಗಿತ್ತು. ವರಾಹವು ರಾಜಲಾಂಛನವಾಗಿತ್ತು.



ಸಾ. ಶ. 1336 ರಿಂದ 1646 ರ ವರೆಗೆ ವಿಜಯನಗರ ಸಾಮ್ರಾಜ್ಯವನ್ನು ಸಂಗಮ ವಂಶ (ಸಾ. ಶ. 1336-1485) ಸಾಳುವ ವಂಶ (ಸಾ. ಶ 1485-1505), ತುಳುವ ವಂಶ (ಸಾ. ಶ 1505-1567) ಹಾಗೂ ಅರವೀಡು ವಂಶ (ಸಾ. ಶ 1570-1646) ಎಂಬ ನಾಲ್ಕು ವಂಶಗಳು ಆಳ್ವಿಕೆ ನಡೆಸಿದವು.

## ಸಂಗಮ ವಂಶ (ಸಾ. ಶ 1336-1485)

**ಹರಿಹರ ಮತ್ತು ಬುಕ್ಕ:** ಹರಿಹರ (ಸಾ. ಶ 1336-57) ನು ಈ ಮನೆತನದ ಮೊದಲ ಅರಸ. ಈತನು ತುಂಗಭದ್ರಾ ನದಿ ಪ್ರದೇಶಗಳ ಮೇಲೆ ಹಿಡಿತ ಸಾಧಿಸಿದನು. ತನ್ನ ರಾಜ್ಯವನ್ನು ಪಶ್ಚಿಮದಲ್ಲಿ ಕೊಂಕಣ ತೀರ ಪ್ರದೇಶದವರೆಗೂ, ಪೂರ್ವದಲ್ಲಿ ನೆಲ್ಲೂರು ಮತ್ತು ಕಡಪಾಗಳವರೆಗೂ, ಉತ್ತರದಲ್ಲಿ ಕೃಷ್ಣ ನದಿ ಹಾಗೂ ದಕ್ಷಿಣದಲ್ಲಿ ಕಾವೇರಿ ನದಿಯವರೆಗೂ ವಿಸ್ತರಿಸಿದನು. ಹೀಗೆ ಆರಂಭದಲ್ಲಿ ರಾಜ್ಯಕ್ಕೆ ಭದ್ರ ಬುನಾದಿ ಹಾಕಿದನು.

ಹರಿಹರನಿಗೆ ಪುತ್ರ ಸಂತಾನವಿಲ್ಲದ್ದರಿಂದ ಅವನ ಮರಣದ ನಂತರ ಸಹೋದರನಾದ ಬುಕ್ಕರಾಯ (ಸಾ. ಶ 1357-1377) ಅಧಿಕಾರಕ್ಕೆ ಬಂದನು. ಈತನ ಕಾಲದಲ್ಲಿ ಮಧುರೆಯ ಸುಲ್ತಾನನನ್ನು ಸೋಲಿಸಿದ ಬುಕ್ಕರಾಯನ ಪುತ್ರ ಕಂಪಣನು ಸಾಮ್ರಾಜ್ಯ ವಿಸ್ತರಿಸಿದನು. ಈ ದಿಗ್ವಿಜಯವನ್ನು ಕುರಿತು ಕಂಪನನ ರಾಣಿ ಗಂಗಾದೇವಿ ಬರೆದ 'ಮಧುರಾ ವಿಜಯಂ' ಎಂಬ ಸಂಸ್ಕೃತ ಕೃತಿಯಲ್ಲಿ ವಿವರಿಸಲಾಗಿದೆ. ಬುಕ್ಕನು ಕೊಂಡವೀಡಿನ ರೆಡ್ಡಿಗಳನ್ನು ಸೋಲಿಸಿ ಪೆನುಕೊಂಡ ಪ್ರದೇಶವನ್ನು ವಿಜಯನಗರದಲ್ಲಿ ಸೇರಿಸಿದನು. ಈತನು ಜೈನರು ಮತ್ತು ಶ್ರೀ ವೈಷ್ಣವರ ನಡುವಿನ ಧಾರ್ಮಿಕ ಕಲಹವನ್ನು ಶಮನಗೊಳಿಸಿ ಸರ್ವಧರ್ಮ ಸಮನ್ವಯತೆಯನ್ನು ಎತ್ತಿಹಿಡಿದ ಬಗ್ಗೆ ಸಾ. ಶ 1368 ರ ಶ್ರವಣಬೆಳಗೊಳ ಶಾಸನ ವಿವರಣೆ ನೀಡುತ್ತದೆ.

ಬುಕ್ಕರಾಯನ ನಂತರ ಎರಡನೇ ಹರಿಹರ (ಸಾ. ಶ 1377-1404) ಇಮ್ಮಡಿ ಬುಕ್ಕ ಇಮ್ಮಡಿ ವಿರೂಪಾಕ್ಷ (ಸಾ. ಶ 1404-1406), ಒಂದನೆಯ ದೇವರಾಯ (ಸಾ. ಶ 1406-1422), ವೀರ ವಿಜಯರಾಯರು (ಸಾ. ಶ 1422-1424) ಆಳಿದರು.

## ಎರಡನೆಯ (ಪ್ರೌಢ) ದೇವರಾಯ (ಸಾ.ಶ 1424-1446)

ಸಂಗಮ ವಂಶದ ಪ್ರಸಿದ್ಧ ದೊರೆಯಾಗಿದ್ದ ಈತನ ಆಳ್ವಿಕೆಯು ವಿಜಯನಗರದಲ್ಲಿ ಮಹತ್ವದ ಕಾಲವಾಗಿದೆ. ಅಧಿಕಾರಕ್ಕೆ ಬಂದ ಮೇಲೆ ನುರಿತ ಬಿಲ್ಲುಗಾರರು ಹಾಗೂ ಕುದುರೆಗಳನ್ನು ಪಳಗಿಸುವ ಕಲೆಯಲ್ಲಿ ಪ್ರವೀಣರಾದ ಮುಸ್ಲಿಮರನ್ನು ಒಳಗೊಂಡಂತೆ ಹೊಸದಾಗಿ ಸೈನವನ್ನು ಸಂಘಟಿಸಿದನು. ಈ ಸೈನದ ನೆರವಿನಿಂದ ಆಂಧ್ರದ ಕೊಂಡವೀಡು ಪ್ರದೇಶದ ರೆಡ್ಡಿ ನಾಯಕರನ್ನು ಸೋಲಿಸಿದನು. ಬಹಮನಿ ಸುಲ್ತಾನ ಅಹ್ಮದ್ ಶಾನೊಂದಿಗೆ ಕಾದಾಡಿ ಪ್ರಸಿದ್ಧಿವಾದ ಮುದುಗಲ್ ಕೋಟೆ, ರಾಯಚೂರು ಹಾಗೂ ಬಂಕಾಪುರಗಳನ್ನು ಸಂರಕ್ಷಿಸಿಕೊಂಡನು. ಈತನ ವೀರ ಸೇನಾನಿಯಾದ ಲಕ್ಕಣ್ಣ ದಂಡೇಶನು ಕೇರಳ ಮತ್ತು ಶ್ರೀಲಂಕಾ ರಾಜರ ಮೇಲೆ ವಿಜಯ ಸಾಧಿಸಿ ಅವರಿಂದ ಕಪ್ಪ ಕಾಣಿಕೆ ಸಂಗ್ರಹಿಸಿದನು.

ಸರ್ವಧರ್ಮ ಸಹಿಷ್ಣು ಆಗಿದ್ದ ಪ್ರೌಢದೇವರಾಯನು ರಾಜಧಾನಿಯಲ್ಲಿ ಜೈನ ಹಾಗೂ ವೈಷ್ಣವ ದೇವಾಲಯಗಳನ್ನು ನಿರ್ಮಿಸಿದನು. ಅಲ್ಲದೇ ಮಸೀದಿಗಳನ್ನು ನಿರ್ಮಿಸಲು ಅವಕಾಶ ಕಲ್ಪಿಸಿದನು. ಈತನ ಆಸ್ಥಾನದಲ್ಲಿ ತೆಲುಗು ಕವಿ ಶ್ರೀನಾಥ, ಸಂಸ್ಕೃತ ವಿದ್ವಾಂಸ ಡಿಂಡಿಮ ಮತ್ತು ಕನ್ನಡ ಕವಿ ಹಾಗೂ ಮಂತ್ರಿಯಾಗಿದ್ದ ಲಕ್ಕಣ್ಣ ದಂಡೇಶ ಮುಂತಾದವರು ಆಶ್ರಯ ಪಡೆದಿದ್ದರು. ಪ್ರೌಢದೇವರಾಯನ ಕಾಲದಲ್ಲಿ ವೀರಶೈವ ಧರ್ಮ ಪುನರುಜ್ಜೀವನ ಕಂಡಿತು.

ಈತನಿಗೆ 'ಗಜವೇಂಟೆಗಾರ', 'ಚತುಸಮುದ್ರಾಧೀಶ್ವರ', 'ಅರಿರಾಯವಿಭಾಡ' ಎಂಬ ಬಿರುದುಗಳಿದ್ದವು. ಸಾ. ಶ 1446 ರಲ್ಲಿ ಪ್ರೌಢದೇವರಾಯನು ಮೃತನಾದ ಮೇಲೆ ಅವನ ಮಗ ಮಲ್ಲಿಕಾರ್ಜುನ (ಸಾ. ಶ 1446-1465) ಹಾಗೂ 3ನೇ ವಿರುಪಾಕ್ಷ (ಸಾ. ಶ 1365-1385)ರು ಆಳ್ವಿಕೆ ನಡೆಸಿದರು. ಇವರು ದುರ್ಬಲರಾಗಿದ್ದರಿಂದ ಪ್ರಬಲ ಸೇನಾನಿಯಾದ ಸಾಳುವ ನರಸಿಂಹನು ರಾಜಧಾನಿಯನ್ನು ವಶಪಡಿಸಿಕೊಂಡನು. ಇದರೊಂದಿಗೆ ಸಂಗಮ ವಂಶದ ಆಳ್ವಿಕೆ ಸಾ. ಶ. 1485 ರಲ್ಲಿ ಕೊನೆಗೊಂಡಿತು.

ಪರ್ಷಿಯಾ ದೇಶದ ರಾಯಭಾರಿ ಅಬ್ದುಲ್ ರಜಾಕ್‌ನು ಪ್ರೌಢದೇವರಾಯನ ಕಾಲದಲ್ಲಿ ವಿಜಯನಗರವನ್ನು ಸಂದರ್ಶಿಸಿ "ವಿಜಯನಗರದಂತಹ ಸಂಪದ್ಭರಿತ ರಾಜಧಾನಿಯನ್ನು ನನ್ನ ಕಣ್ಣುಗಳು ಮೊದಲ ಬಾರಿ ನೋಡುತ್ತಿವೆ. ನಗರಕ್ಕೆ ಏಳು ಕೋಟೆಗಳ ಆವರಣವಿದೆ. ರಾಯನ ಸೇನೆ ಲಕ್ಷಾವಧಿ ಸಂಖ್ಯೆಯಲ್ಲಿದೆ" ಎಂದು ವರ್ಣಿಸಿದ್ದಾನೆ.

## ಸಾಳುವ ವಂಶ (ಸಾ. ಶ 1485-1505)

ಸಾ. ಶ 1485 ರಲ್ಲಿ ಅಧಿಕಾರಕ್ಕೆ ಬಂದ ಸಾಳುವ ನರಸಿಂಹನು 6 ವರ್ಷ ಆಡಳಿತ ನಡೆಸಿ ಸಾ. ಶ 1491 ರಲ್ಲಿ ಮರಣ ಹೊಂದಿದನು. ಆಗ ಆತನ ಮಕ್ಕಳು ಅಪ್ರಾಪ್ತರಾಗಿದ್ದರಿಂದ ಸಾ. ಶ

1491 ರಿಂದ ಸಾ. ಶ 1503 ರ ವರೆಗೆ ಆಡಳಿತವು ತುಳುವ ನರಸನಾಯಕ ಎಂಬ ಸೇನಾನಿಯ ರಕ್ಷಣೆಯಲ್ಲಿ ನಡೆಯಿತು.

## ತುಳುವ ವಂಶ (ಸಾ. ಶ 1505-1567)

ಸಾ. ಶ 1505 ರಲ್ಲಿ ತುಳುವ ನರಸನಾಯಕನ ಮಗ ವೀರ ನರಸಿಂಹನು ತುಳುವ ಮನೆತನದ ಆಳ್ವಿಕೆ ಪ್ರಾರಂಭಿಸಿದನು. ಇವನು 1509 ರಲ್ಲಿ ಮರಣ ಹೊಂದಿದ ನಂತರ ಅವನ ಸೋದರರಲ್ಲಿ ಕೃಷ್ಣದೇವರಾಯನು ಅಧಿಕಾರಕ್ಕೆ ಬಂದನು.

## ಕೃಷ್ಣದೇವರಾಯ (ಸಾ. ಶ 1509-1529)

ಕೃಷ್ಣದೇವರಾಯನು ವಿಜಯನಗರ ಅರಸರಲ್ಲಿಯೇ ಅತ್ಯಂತ ಪ್ರಸಿದ್ಧ ದೊರೆಯಾಗಿದ್ದನು. ಅಧಿಕಾರಕ್ಕೆ ಬಂದ ಹೊಸದರಲ್ಲಿ ಈತನು ಅನೇಕ ಬಂಡಾಯಗಳನ್ನು ಎದುರಿಸಬೇಕಾಯಿತು.

ಸಾ. ಶ. 1510 ರಲ್ಲಿ ಉಮ್ಮತ್ತೂರಿನ ಪಾಳೆಯಗಾರ ಗಂಗರಾಜನಿಂದ ಶಿವನಸಮುದ್ರ ಕೋಟೆಯನ್ನು ವಶಪಡಿಸಿಕೊಂಡನು. ನಂತರ ರಾಯಚೂರು ಕೋಟೆಯನ್ನು ಗೆದ್ದನು. ಬಿಜಾಪುರದ ಸುಲಾನನಿಂದ ಗೋವೆಯನ್ನು ವಶಪಡಿಸಿಕೊಳ್ಳುವಲ್ಲಿ ಪೋರ್ಚುಗೀಸರಿಗೆ ಸಹಾಯ ಮಾಡಿದನು. ಸಾ. ಶ. 1513 ರಲ್ಲಿ ಉದಯಗಿರಿ ಕೋಟೆಯನ್ನು, ಸಾ. ಶ. 1518 ಕಳಿಂಗದ ದೊರೆ ಗಜಪತಿ ಪ್ರತಾಪರುದ್ರನನ್ನು ಸೋಲಿಸಿ ರಾಜಧಾನಿ ಕಟಕ್ ಅನ್ನು ವಶಪಡಿಸಿಕೊಂಡನು ಹಾಗೂ ಗಜಪತಿಯ ಮಗಳಾದ ಜಗನ್ಮೋಹಿನಿಯನ್ನು ಮದುವೆಯಾದನು.




ಸಾ. ಶ 1522 ರಲ್ಲಿ ಆದಿಲ್‌ಶಾಹಿ ದೊರೆ ಇಸ್ಮಾಯಿಲ್ ಆದಿಲ್‌ಖಾನ್‌ನಿಂದ ರಾಯಚೂರನ್ನು ಮತ್ತೆ ವಶಪಡಿಸಿಕೊಂಡನು. ಮುಂದುವರೆದು ಕಲಬುರಗಿ, ಬೀದರ್ ಕೋಟೆಗಳನ್ನು ವಶಪಡಿಸಿಕೊಂಡನು. ಬಹಮನಿ ರಾಜ್ಯದ ಪ್ರಧಾನಿ ಬಂಧಿಸಿಟ್ಟಿದ್ದ ರಾಜಪುತ್ರನನ್ನು ಬಿಡುಗಡೆಗೊಳಿಸಿ ಬೀದರಿನ ಸಿಂಹಾಸನದ ಮೇಲೆ ಪ್ರತಿಷ್ಠಾಪಿಸಿದನು. ಅದಕ್ಕಾಗಿ ಕೃಷ್ಣದೇವರಾಯನು 'ಯವನ ರಾಜ್ಯ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದು ಧರಿಸಿದನು. ಸಾ. ಶ 1529 ರಲ್ಲಿ ಕೃಷ್ಣದೇವರಾಯನು ಮರಣ ಹೊಂದುವ ವೇಳೆಗೆ ವಿಜಯನಗರ ಸಾಮ್ರಾಜ್ಯ ನಾಲ್ಕೂ ದಿಕ್ಕುಗಳಲ್ಲಿ ವಿಸ್ತರಿಸಿತ್ತು. ಈತನ ಆಸ್ಥಾನಕ್ಕೆ ಭೇಟಿ ನೀಡಿದ ಡೊಮಿಂಗೊ ಪೆಯಸ್ "ಕೃಷ್ಣದೇವರಾಯನು ಸೌಮ್ಯ ಸ್ವಭಾವದ ವ್ಯಕ್ತಿತ್ವ ಹೊಂದಿದ್ದು, ದೃಢಕಾಯದವನಾಗಿದ್ದನು" ಎಂದಿದ್ದಾರೆ.

ಅಸಾಮಾನ್ಯ ಪರಾಕ್ರಮಿ, ಚತುರ ಸೇನಾನಿ ಮತ್ತು ರಾಜತಾಂತ್ರಿಕ ನಿಪುಣನಾಗಿದ್ದ ಕೃಷ್ಣದೇವರಾಯನು ಶತ್ರುಗಳನ್ನು ಸದೆಬಡಿದು ದಕ್ಷಿಣ ಭಾರತದಲ್ಲಿ ವಿಜಯನಗರ ಸಾಮ್ರಾಜ್ಯವನ್ನು ವಿಸ್ತರಿಸಿದನೆಂದು ಇತಿಹಾಸಕಾರ ರಾಬರ್ಟ್ ಸಿವೆಲ್ ಹೇಳುತ್ತಾನೆ.

## ರಕ್ಕಸ ತಂಗಡಿ ಕದನ

ಕೃಷ್ಣದೇವರಾಯನ ನಂತರ ಅಚ್ಯುತರಾಯ (ಸಾ. ಶ. 1530-1542) ಮತ್ತು ಸದಾಶಿವರಾಯರು (ಸಾ. ಶ. 1543-1565) ಆಳಿದರು. ಸದಾಶಿವರಾಯರು ಇನ್ನೂ ಅಪ್ರಾಪ್ತರಾಗಿದ್ದ ಕಾರಣ ಆಡಳಿತದ ಸಂಪೂರ್ಣ ಜವಾಬ್ದಾರಿಯನ್ನು ಕೃಷ್ಣದೇವರಾಯನ ಅಳಿಯ ಅರವೀಡು ವಂಶದ ರಾಮರಾಯನು ವಹಿಸಿಕೊಂಡನು. ಈತನ ರಾಜತಾಂತ್ರಿಕ ನಡೆಗಳು ವಿಜಯನಗರ ರಾಜ್ಯವನ್ನು ವಿಸ್ತರಿಸಿತಲ್ಲದೆ ಶ್ರೀಮಂತಗೊಳಿಸಿತು. ಜೊತೆಗೆ ವೈರಿಗಳ ಸಂಖ್ಯೆಯನ್ನೂ ಹೆಚ್ಚಿಸಿತು.

ದಖ್ಖನ್ನಿನ ಸುಲ್ತಾನರ ರಾಜ್ಯಗಳು ಆಗಾಗ ನಡೆಸುತ್ತಿದ್ದ ದಾಳಿಯ ಪ್ರತೀಕಾರವಾಗಿ ರಾಮರಾಯನು ಬಿಜಾಪುರ ಹಾಗೂ ಗೋಲ್ಕೊಂಡ ರಾಜ್ಯಗಳ ಪ್ರದೇಶಗಳನ್ನು ವಶಪಡಿಸಿಕೊಂಡಿದ್ದು ಕದನಕ್ಕೆ ಪ್ರಚೋದನೆ ನೀಡಿದವು. ವಿಜಯನಗರ ಸಾಮ್ರಾಜ್ಯದ ಏಳಿಗೆ ಹಾಗೂ ಸಮೃದ್ಧಿಯ ಬಗ್ಗೆ ಮತ್ಸರ ಹಾಗೂ ದ್ವೇಷಗಳನ್ನು ಹೊಂದಿದ್ದ ಸುಲ್ತಾನರು ತಮ್ಮ ರಾಜಕೀಯ ಭಿನ್ನಾಭಿಪ್ರಾಯಗಳನ್ನು ಮರೆತು ಒಂದಾದರು.

ಸಾ.ಶ 1565 ಜನವರಿ 23 ರಂದು ದಖ್ಖನ್ ಸುಲ್ತಾನರ ಒಕ್ಕೂಟ ಸೈನ್ಯಕ್ಕೂ ಹಾಗೂ ವಿಜಯನಗರದ ಸೈನ್ಯಕ್ಕೂ ಕೃಷ್ಣಾ ನದಿಯ ದಂಡೆಯ ಮೇಲೆ ನಡೆದ ರಕ್ಕಸ ತಂಗಡಿ ಯುದ್ಧದಲ್ಲಿ ರಾಮರಾಯನು ಹತನಾದನು. ಗೆದ್ದ ಸುಲ್ತಾನರು ವಿಜಯನಗರವನ್ನು ಲೂಟಿ ಮಾಡಿದರು. ರಣರಂಗದಿಂದ ಪಲಾಯನಗೈದ ರಾಮರಾಯನ ಮಕ್ಕಳಾದ ತಿರುಮಲ ಮತ್ತು ವೆಂಕಟರು ಪೆನುಕೊಂಡಕ್ಕೆ ಓಡಿಹೋದರು. ಮುಂದೆ ಪೆನುಕೊಂಡ, ಚಂದ್ರಗಿರಿ ಕೊನೆಯಲ್ಲಿ ವೆಲ್ಲೂರ್‌ಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ಅರವೀಡು ವಂಶಜರು ಸಾ. ಶ. 1570 ರಿಂದ 1646 ರ ವರೆಗೆ ಆಡಳಿತ ನಡೆಸಿದರು. ಈ ಯುದ್ಧದ ಪರಿಣಾಮವಾಗಿ ಕರ್ನಾಟಕದಲ್ಲಿ ಮೈಸೂರು, ಕೆಳದಿ, ಚಿತ್ರದುರ್ಗ, ಯಲಹಂಕ ಮತ್ತು ಸುರುಪುರ ಮುಂತಾದ ನಾಯಕರು ಮತ್ತು ಪಾಳೇಗಾರರು ಸ್ವತಂತ್ರರಾದರು.

## ವಿಜಯನಗರದ ಸಾಂಸ್ಕೃತಿಕ ಕೊಡುಗೆಗಳು

ಆಡಳಿತ: ವಿಜಯನಗರ ಸಾಮ್ರಾಜ್ಯವು ಬಲಿಷ್ಠ ಕೇಂದ್ರಾಡಳಿತವನ್ನು ಹೊಂದಿತ್ತು ಹಾಗೂ ವಿಕೇಂದ್ರೀಕೃತ ಆಡಳಿತ ಪದ್ಧತಿಯನ್ನು ಅಳವಡಿಸಿಕೊಂಡಿತ್ತು. ಆಡಳಿತದಲ್ಲಿ ರಾಜನಿಗೆ ಸಹಾಯಕರಾಗಿ ವಿವಿಧ ಮಂತ್ರಿಗಳು, ವಿವಿಧ ಪ್ರಾಂತಗಳ ನಾಯಕರು ಇದ್ದರು. ಆಡಳಿತ ದೃಷ್ಟಿಯಿಂದ ಸಾಮ್ರಾಜ್ಯವನ್ನು ಪ್ರಾಂತ್ಯಗಳಾಗಿ, ಪ್ರಾಂತ್ಯಗಳನ್ನು ನಾಡುಗಳಾಗಿ, ನಾಡುಗಳನ್ನು ನಗರಗಳಾಗಿ, ನಗರಗಳನ್ನು ಹಳ್ಳಿಗಳ ಸಮೂಹಗಳಾಗಿ ವಿಂಗಡಿಸಿದ್ದರು. ಪ್ರಾಂತಗಳಲ್ಲಿ ರಾಜಪ್ರತಿನಿಧಿಯೂ ಗ್ರಾಮಗಳಲ್ಲಿ ವಂಶಪಾರಂಪರ್ಯದಿಂದ ಬಂದ ಅಧಿಕಾರಿಗಳು ಆಡಳಿತ ನಿರ್ವಹಿಸುತ್ತಿದ್ದರು.

ಅರಸನು ನ್ಯಾಯಾಂಗದ ಪರಮಾಧಿಕಾರಿಯಾಗಿದ್ದನು. ಪ್ರಾಂತ್ಯಗಳಲ್ಲಿ ಪ್ರಾಂತಾಧಿಕಾರಿ ನ್ಯಾಯ ನೀಡುತ್ತಿದ್ದನು. ಆದಾಯದ ಪ್ರಮುಖ ಮೂಲ ಭೂಕಂದಾಯವನ್ನು 1/6 ಭಾಗದಷ್ಟು ಸಂಗ್ರಹಿಸಲಾಗುತ್ತಿತ್ತು. ಇದರೊಂದಿಗೆ ವಾಣಿಜ್ಯ ತೆರಿಗೆ, ವೃತ್ತಿ ತೆರಿಗೆ, ದಾರಿ ಸುಂಕ, ಸಂತೆ ಸುಂಕ, ರಫ್ತು ತೆರಿಗೆ, ಕಪ್ಪ ಕಾಣಿಕೆಗಳು ರಾಜ್ಯಾದಾಯದ ಮೂಲಗಳಾಗಿದ್ದವು.

ವಿಜಯನಗರದ ಕಾಲದಲ್ಲಿ ಕಾಲ್ದಳ, ಅಶ್ವದಳ, ಗಜದಳ, ಮತ್ತು ಫಿರಂಗಿ ಪಡೆಗಳು ಸೈನ್ಯದ ಪ್ರಮುಖ ಅಂಗಗಳಾಗಿದ್ದವು. ಅರಬ್ ದೇಶದ ಕುದುರೆಗಳು ವಿಜಯನಗರದ ಆಕರ್ಷಣೆಯಾಗಿದ್ದವು.

ಸಾಮಾಜಿಕ ಸ್ಥಿತಿ: ವಿಜಯನಗರ ಕಾಲದ. ಸಮಾಜದಲ್ಲಿ ಬಾಲ್ಯ ವಿವಾಹ, ಸತಿ ಪದ್ಧತಿ ಹಾಗೂ ದೇವದಾಸಿ ಪದ್ಧತಿಗಳು ರೂಢಿಯಲ್ಲಿದ್ದವು. ಏಕ ಪತ್ನಿತ್ವ ಸಾಮಾನ್ಯವಾಗಿದ್ದರೂ ಶ್ರೀಮಂತರು, ಅರಸರು ಬಹುಪತ್ನಿತ್ವ ಅನುಸರಿಸುತ್ತಿದ್ದರು. ಸ್ತ್ರೀಯರಿಗೆ ಗೌರವ ನೀಡಲಾಗುತ್ತಿತ್ತು. ದೀಪಾವಳಿ ಮತ್ತು ದಸರಾ ಹಬ್ಬಗಳನ್ನು ವಿಜೃಂಭಣೆಯಿಂದ ಸಾರ್ವಜನಿಕವಾಗಿ ಆಚರಿಸಲಾಗುತ್ತಿತ್ತು. ದಸರಾ ಹಬ್ಬವು ರಾಜಾಶ್ರಯದಲ್ಲಿ ನಡೆಯುತ್ತಿತ್ತು.

ಆರ್ಥಿಕ ಸ್ಥಿತಿ: ಕೃಷಿಯು ಮುಖ್ಯ ಕಸುಬಾಗಿತ್ತು. ಅಕ್ಕಿ, ಜೋಳ, ಕಬ್ಬು ಮತ್ತು ಹತ್ತಿಗಳು ಮುಖ್ಯ ಬೆಳೆಗಳಾಗಿದ್ದವು. ವಿಜಯನಗರದ ಅರಸರು ಕೆರೆ, ಕಟ್ಟೆ, ಬಾವಿಗಳನ್ನು ಕಟ್ಟಿಸುವುದರ ಮೂಲಕ ಕೃಷಿಗೆ ಉತ್ತೇಜನ ನೀಡಿದರು. ವಿದೇಶಗಳೊಂದಿಗೆ ವಾಣಿಜ್ಯ ಸಂಪರ್ಕ ಇಟ್ಟುಕೊಂಡಿದ್ದರಿಂದ ಅಕ್ಕಿ, ಹತ್ತಿ ಬಟ್ಟೆಗಳು, ಕಬ್ಬಿಣ, ವಜ್ರ, ಸಕ್ಕರೆ, ಕಸ್ತೂರಿ, ಶ್ರೀಗಂಧ, ಸಾಂಬಾರು ಪದಾರ್ಥಗಳು ಮುಂತಾದವುಗಳು ರಫ್ತಾಗುತ್ತಿದ್ದವು. ಕುದುರೆ, ರೇಷ್ಮೆ ಬಟ್ಟೆಗಳು, ಮಖಮಲ್ ಬಟ್ಟೆಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು. ವಿಜಯನಗರವು ವಜ್ರದ ವ್ಯಾಪಾರಕ್ಕೆ ಅಂತಾರಾಷ್ಟ್ರೀಯ ವ್ಯಾಪಾರ ಕೇಂದ್ರವಾಗಿತ್ತು. ಬಟ್ಟೆ ನೇಯುವುದು ಪ್ರಮುಖ ಕೈಗಾರಿಕೆಯಾಗಿತ್ತು. ಭಟ್ಕಳ, ಹೊನ್ನಾವರ, ಮಂಗಳೂರುಗಳು ಪ್ರಮುಖ ರೇವು ಪಟ್ಟಣಗಳಾಗಿದ್ದವು. ಹೊನ್ನು ಅಥವಾ ವರಹ ಚಿನ್ನದ ನಾಣ್ಯವಾಗಿತ್ತು. ನಾಣ್ಯಗಳ ಮೇಲೆ ದೇವದೇವತೆಗಳ ಚಿತ್ರಗಳಿರುತ್ತಿದ್ದವು.

ಸಾಹಿತ್ಯ: ವಿಜಯನಗರ ಅರಸರ ಕಾಲದಲ್ಲಿ ಸಂಸ್ಕೃತ, ತೆಲುಗು ಮತ್ತು ಕನ್ನಡ ಭಾಷೆಗಳ ಸಾಹಿತ್ಯವು ವಿಶೇಷವಾಗಿ ಬೆಳೆಯಿತು. ಸಂಸ್ಕೃತ ಭಾಷೆಯಲ್ಲಿ ವಿದ್ಯಾರಣ್ಯರು 'ಶಂಕರ ವಿಜಯ' ಮತ್ತು 'ಸರ್ವದರ್ಶನ ಸಂಗ್ರಹ' ಕೃತಿಗಳನ್ನು ಬರೆದರು. ವಿದ್ಯಾರಣ್ಯರ ಸಹೋದರ ಸಾಯಣಾಚಾರ್ಯರು 'ವೇದಾರ್ಥಪ್ರಕಾಶ' ಮತ್ತು 'ಆಯುರ್ವೇದ ಸುಧಾನಿಧಿ' ಗ್ರಂಥಗಳನ್ನು ರಚಿಸಿದರು. ವಿಜಯನಗರದ ಅರಸರು ಮತ್ತು ಪರಿವಾರದವರು ಕೂಡ ಸಾಹಿತ್ಯ ರಚಿಸಿದ್ದಾರೆ. ಅವರಲ್ಲಿ ಗಂಗಾದೇವಿಯು 'ಮಧುರಾ ವಿಜಯಂ' ಎಂಬ ಕೃತಿಯನ್ನು, ಪ್ರೌಢದೇವರಾಯ ಮಹಾನಾಟಕ 'ಸುಧಾನಿಧಿ' ಯನ್ನು, ಕೃಷ್ಣದೇವರಾಯನು 'ಜಾಂಬವತಿ ಕಲ್ಯಾಣ', 'ಮದಾಲಸ ಚರಿತಂ', 'ರಸಮಂಜರಿ' ಎಂಬ ಕೃತಿಗಳನ್ನು ರಚಿಸಿದರು. ಕನ್ನಡ ಭಾಷೆಗೆ ಸಂಬಂಧಿಸಿದಂತೆ ಕುಮಾರವ್ಯಾಸನ 'ಗದುಗಿನ ಭಾರತ', ರತ್ನಾಕರವರ್ಣಿಯ 'ಭರತೇಶ ವೈಭವ', ಚಾಮರಸನ 'ಪ್ರಭುಲಿಂಗಲೀಲೆ' ಮುಂತಾದವುಗಳು ಪ್ರಮುಖವಾದವುಗಳು. ಲಕ್ಕಣ್ಣ ದಂಡೇಶನು 'ಶಿವತತ್ವ ಚಿಂತಾಮಣಿ', ಭೀಮ ಕವಿಯ 'ಬಸವ ಪುರಾಣ' ಮುಂತಾದ ವೀರಶೈವ ಸಾಹಿತ್ಯವೂ ಅಪಾರವಾಗಿ ಬೆಳೆಯಿತು.

ಕೃಷ್ಣದೇವರಾಯನು ತೆಲುಗು ಭಾಷೆ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿದ್ದರಿಂದ ಅವನಿಗೆ 'ಆಂಧ್ರ ಭೋಜ' ಎಂಬ ಬಿರುದು ಬಂದಿತು. ಸ್ವತಃ ಕವಿಯಾಗಿದ್ದ ಕೃಷ್ಣದೇವರಾಯನು ತೆಲುಗಿನಲ್ಲಿಯೂ 'ಆಮುಕ್ತ ಮಾಲ್ಯದ' ಕೃತಿಯನ್ನು ರಚಿಸಿದ್ದಾನೆ. ಅಲ್ಲದೆ ತನ್ನ ಆಸ್ಥಾನದಲ್ಲಿ ಅಷ್ಟ ದಿಗ್ಗಜರೆಂದೇ ಪ್ರಖ್ಯಾತರಾಗಿದ್ದ ಅಲ್ಲಸಾನಿ ಪೆದ್ದಣ್ಣ, ನಂದಿ ತಿಮ್ಮಣ್ಣ, ಶ್ರೀನಾಥ, ಸೂರಣ್ಣ, ತೆನಾಲಿ ರಾಮಕೃಷ್ಣ ಮುಂತಾದವರಿಗೆ ಆಶ್ರಯದಾತನಾಗಿದ್ದನು.

ಧರ್ಮ ಸಮನ್ವಯ: ವಿಜಯನಗರದ ಅರಸರು ಪರಮತ ಸಹಿಷ್ಣುಗಳಾಗಿದ್ದರು. ಅವರು ರಾಜಧಾನಿಯಲ್ಲಿ ಮಸೀದಿಯೊಂದನ್ನು ಕಟ್ಟಿಸಿದರು. ಬುಕ್ಕರಾಯನು ಜೈನ ಮತ್ತು ವೈಷ್ಣವರ ನಡುವೆ ತಲೆದೋರಿದ್ದ ಭಿನ್ನಾಭಿಪ್ರಾಯವನ್ನು ಹೋಗಲಾಡಿಸಿದನೆಂದು ಆತನ ಸಾ. ಶ. 1368 ರ ಶ್ರವಣಬೆಳಗೊಳ ಶಾಸನ ತಿಳಿಸುತ್ತದೆ. ಕ್ರಿಶ್ಚಿಯನ್, ಯಹೂದಿ, ಮುಸ್ಲಿಂ, ಹಿಂದೂ ಯಾರಾದರೂ ಸಹ ವಿಜಯನಗರ ಸಾಮ್ರಾಜ್ಯದಲ್ಲಿ ನಿಶ್ಚಿಂತೆಯಿಂದ ಜೀವಿಸಬಹುದಾಗಿತ್ತೆಂದೂ, ರಾಜರು ಎಲ್ಲರನ್ನೂ ಗೌರವದಿಂದ ಕಾಣುತ್ತಾರೆ ಎಂದೂ ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ್ದ ಬಾರ್ಬೋಸ ತಿಳಿಸಿದ್ದಾನೆ.

ಕಲೆ ಮತ್ತು ವಾಸ್ತುಶಿಲ್ಪ: ವಿಜಯನಗರ ಅರಸರ ಕಾಲದಲ್ಲಿ ರಚನೆಗೊಂಡ ದೇವಾಲಯಗಳು, ಕಟ್ಟಡಗಳು ಮತ್ತು ಮೂರ್ತಿಶಿಲ್ಪಗಳನ್ನೆಲ್ಲ ಅವಲೋಕಿಸಿ ಖ್ಯಾತ ಕಲಾ ಇತಿಹಾಸಕಾರರಾದ ಪರ್ಸಿಬ್ರೌನ್ ವಿಜಯನಗರ ವಾಸ್ತುಶಿಲ್ಪ ಶೈಲಿಯನ್ನು 'ದ್ರಾವಿಡ ಶೈಲಿಯ ಶ್ರೇಷ್ಠ ವಿಕಸಿತ ಸ್ವರೂಪ' ಎಂದು ಬಣ್ಣಿಸಿದ್ದಾರೆ.



ಈ ಕಾಲದ ದೇವಾಲಯಗಳು ಬಿರುಸಾದ ಬೆಣಚು ಕಲ್ಲುಗಳಿಂದ ರಚನೆಗೊಂಡಿವೆ. ಹಂಪೆಯ ವಿರೂಪಾಕ್ಷ ದೇವಾಲಯದ ಕಲ್ಯಾಣ ಮಂಟಪ, ಹಜಾರ ರಾಮಸ್ವಾಮಿ ದೇವಾಲಯ, ವಿಠ್ಠಲಸ್ವಾಮಿ ದೇವಾಲಯ, ಕೃಷ್ಣಸ್ವಾಮಿ ದೇವಾಲಯ, ಗಾರೆಯಿಂದ ರಚಿಸಿದ ಕಮಲ್ ಮಹಲ್, ಶೃಂಗೇರಿ ವಿದ್ಯಾಶಂಕರ ದೇವಾಲಯ, ಪ್ರಮುಖವಾದವುಗಳು. ವಿಶಾಲವಾದ ಪ್ರಾಕಾರ, ಎತ್ತರದ ಗೋಪುರ, ವಿಶಾಲ ಕಲ್ಯಾಣ ಮಂಟಪ, ಸಭಾ ಮಂಟಪ, ವಸಂತ ಮಂಟಪ ಮುಂತಾದವುಗಳು ವಿಜಯನಗರ ಕಾಲದ ದೇವಾಲಯದ ಲಕ್ಷಣಗಳಾಗಿವೆ.



ಕಾಳಹಸ್ತಿ, ಶ್ರೀಶೈಲ, ತಿರುಪತಿ, ಚಿದಂಬರಂ, ಶ್ರೀರಂಗಂ, ಕುಂಭಕೋಣಂ, ಕಾಂಚಿ ಮುಂತಾದ ಕಡೆಗಳಲ್ಲಿ ವಿಜಯನಗರ ಕಾಲದ ವಾಸ್ತುಶಿಲ್ಪಗಳನ್ನು ಕಾಣಬಹುದು.

ಶೈವರ ಅಜಂತಾ ಎಂದು ಪ್ರಸಿದ್ಧವಾಗಿರುವ ಲೇಪಾಕ್ಷಿ ದೇವಾಲಯವು ವಿಜಯನಗರ ಕಾಲದ ಶಿವಪುರಾಣ ಚಿತ್ರಗಳನ್ನು ಹೊಂದಿದೆ. ಹಂಪೆಯ ವಿರುಪಾಕ್ಷ ದೇವಾಲಯ ಕಲ್ಯಾಣ ಮಂಟಪದ ಮೇಲ್ಛಾವಣಿಯಲ್ಲಿ ದಶಾವತಾರ ಮತ್ತು ಗಿರಿಜಾ ಕಲ್ಯಾಣಕ್ಕೆ ಸಂಬಂಧಿಸಿದ ದೃಶ್ಯಗಳನ್ನು ಚಿತ್ರಿಸಲಾಗಿದೆ.







ಹಂಪೆಯ ಕಲ್ಲಿನ ರಥ, ನರಸಿಂಹ ಮತ್ತು ಗಣಪತಿ ವಿಗ್ರಹಗಳು ವಿಜಯನಗರ ಕಾಲದ ಏಕಶಿಲಾ ಶಿಲ್ಪಕಲೆಯನ್ನು ಎತ್ತಿ ತೋರಿಸುತ್ತವೆ. ಕರ್ನಾಟಕ ಸಂಗೀತವೆಂದು ಪರಿಚಿತವಾದ ದಕ್ಷಿಣಾದಿ ಸಂಗೀತ ಈ ಕಾಲದಲ್ಲಿ ಜನಸಾಮಾನ್ಯರಿಗೂ ಮುಟ್ಟಿತು. ಪುರಂದರದಾಸರು ಹಾಗೂ ಕನಕದಾಸರು ಈ ಕ್ಷೇತ್ರಕ್ಕೆ ವಿಶೇಷ ಕೊಡುಗೆ ನೀಡಿದ್ದಾರೆ.

### ಕಾಲಗಣನೆ (ಸಾ. ಶ.)

1. ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಕಾಲ- 1336-1565
2. ಸಂಗಮ ವಂಶ- 1336-1485
3. ಹರಿಹರ- 1336-1357
4. ಬುಕ್ಕರಾಯ- 1357-1377
5. ಎರಡನೆಯ (ಪ್ರೌಢ) ದೇವರಾಯ- 1424-1446
6. ಸಾಳುವ ವಂಶ- 1485-1505
7. ತುಳುವ ನರಸನಾಯಕ- 1491-1503

8. ತುಳುವ ವಂಶ- 1505-1567

9. ಕೃಷ್ಣದೇವರಾಯ- 1509-1529

10. ರಕ್ಕಸತಂಗಡಿ ಯುದ್ಧ- 1565, ಜನವರಿ 23

ಶೈವರ ಅಜಂತಾ ಎಂದು ಪ್ರಸಿದ್ಧವಾಗಿರುವ ಲೇಪಾಕ್ಷಿ ದೇವಾಲಯವು ವಿಜಯನಗರ ಕಾಲದ ಶಿವಪುರಾಣ ಚಿತ್ರಗಳನ್ನು ಹೊಂದಿದೆ. ಹಂಪೆಯ ವಿರುಪಾಕ್ಷ ದೇವಾಲಯದ ಕಲ್ಯಾಣ ಮಂಟಪದ ಮೇಲ್ಛಾವಣಿಯಲ್ಲಿ ದಶಾವತಾರ ಮತ್ತು ಗಿರಿಜಾ ಕಲ್ಯಾಣಕ್ಕೆ ಸಂಬಂಧಿಸಿದ ದೃಶ್ಯಗಳನ್ನು ಚಿತ್ರಿಸಲಾಗಿದೆ.

## ಅಭ್ಯಾಸಗಳು

### I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.

1. ಶ್ರೀಲಂಕಾದ ರಾಜರನ್ನು ಸೋಲಿಸಿ ಕಪ್ಪಕಾಣಿಕೆ ಪಡೆದ ಎರಡನೆಯ ದೇವರಾಯನ ಸೇನಾನಿ _______
2. ಕೃಷ್ಣದೇವರಾಯನು ಗಜಪತಿ ಪ್ರತಾಪರುದ್ರನ ಮಗಳಾದ _______ ಅನ್ನು ಮದುವೆಯಾದನು.
3. ವಿಜಯನಗರ ಸಾಮ್ರಾಜ್ಯದಲ್ಲಿ ವರಹ _______ ನಾಣ್ಯವಾಗಿತ್ತು.
4. ಎಲ್ಲಾ ಧರ್ಮಿಯರೂ ವಿಜಯನಗರ ಸಾಮ್ರಾಜ್ಯದಲ್ಲಿ ನಿಶ್ಚಿಂತೆಯಿಂದ ಜೀವಿಸಬಹುದಾಗಿತ್ತು ಎಂದು ಹೇಳಿದ ವಿದೇಶಿ ಪ್ರವಾಸಿಗ _______
5. ವಿಜಯನಗರ ವಾಸ್ತು ಶೈಲಿಯು ದ್ರಾವಿಡ ಶೈಲಿಯ ಶ್ರೇಷ್ಠ ವಿಕಸಿತ ಸ್ವರೂಪ ಎಂದು ಹೇಳಿದ ಕಲಾ ಇತಿಹಾಸಕಾರ _______

### II. ಈ ಕೆಳಕಂಡ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.

1. ವಿಜಯನಗರ ಸಾಮ್ರಾಜ್ಯದ ಸ್ಥಾಪಕರು ಯಾರು?
2. ವಿಜಯನಗರ ಸಾಮ್ರಾಜ್ಯವನ್ನಾಳಿದ ವಂಶಗಳಾವುವು?
3. ಸಂಗಮ ವಂಶದ ಪ್ರಖ್ಯಾತ ದೊರೆ ಯಾರು?
4. ವಿಜಯನಗರ ಸಾಮ್ರಾಜ್ಯದ ಅರಸರಲ್ಲಿ ಅತ್ಯಂತ ಶ್ರೇಷ್ಠ ದೊರೆ ಯಾರು?
5. ರಕ್ಕಸ ತಂಗಡಿ ಕದನ ಯಾವಾಗ ನಡೆಯಿತು?
6. ವಿಜಯನಗರ ಸಾಮ್ರಾಜ್ಯದ ರಾಜ್ಯಾದಾಯದ ಮೂಲಗಳಾವುವು?
7. ವಿಜಯನಗರ ಸಾಮ್ರಾಜ್ಯದಲ್ಲಿ ಆಚರಿಸುತ್ತಿದ್ದ ಹಬ್ಬಗಳಾವುವು?

8. ವಿಜಯನಗರ ಸಾಮ್ರಾಜ್ಯದಲ್ಲಿ ಬೆಳೆಯುತ್ತಿದ್ದ ಪ್ರಮುಖ ಬೆಳೆಗಳಾವುವು?
9. ಕೃಷ್ಣದೇವರಾಯನ ಕೃತಿಗಳನ್ನು ತಿಳಿಸಿ.
10. ವಿಜಯನಗರಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿಗರನ್ನು ಹೆಸರಿಸಿ.
11. ವಿಜಯನಗರ ಕಾಲದ ಪ್ರಮುಖ ದೇವಾಲಯಗಳಾವುವು?

**III. ಈ ಕೆಳಕಂಡ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿ.**

1. ಕೃಷ್ಣದೇವರಾಯನ ದಿಗ್ವಿಜಯಗಳನ್ನು ಕುರಿತು ಬರೆಯಿರಿ.
2. ವಿಜಯನಗರ ಕಾಲದ ಸಾಹಿತ್ಯ ಕೃತಿಗಳನ್ನು ಪಟ್ಟಿ ಮಾಡಿ.

**IV. ಈ ಕೆಳಗಿನ 'ಎ' ಪಟ್ಟಿಗೆ ಸಂಬಂಧಿಸಿದ 'ಬಿ' ಪಟ್ಟಿಯಲ್ಲಿನ ವಿಷಯಗಳನ್ನು ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| 1. ಗಂಗಾದೇವಿ | a. ಆಂಧ್ರಭೋಜ |
| 2.ಎರಡನೆಯ ದೇವರಾಯ | b. ಮಧುರಾ ವಿಜಯಂ |
| 3. ಕೃಷ್ಣದೇವರಾಯ | c. ವಿದ್ಯಾಶಂಕರ ದೇವಾಲಯ |
| 4. ಶೃಂಗೇರಿ | d. ಗಜವೇಂಟೆಗಾರ |

**ಚಟುವಟಿಕೆಗಳು**

1. ವಿಜಯನಗರದ ಸ್ಮಾರಕಗಳ ಛಾಯಾ ಚಿತ್ರಗಳನ್ನು ಸಂಗ್ರಹಿಸಿ, ವಿವರಣೆಯನ್ನು ಬರೆಯಿರಿ.
2. ವಿಜಯನಗರ ಕಾಲದ ಮೂರ್ತಿಶಿಲ್ಪಗಳ ಚಿತ್ರಗಳನ್ನು ಸಂಗ್ರಹಿಸಿ ವಿವರಣೆಯನ್ನು ಬರೆಯಿರಿ.
3. ಪುರಂದರ ಮತ್ತು ಕನಕದಾಸರ ಒಂದೆರಡು ಕೀರ್ತನೆಗಳನ್ನು ಸಂಗ್ರಹಿಸಿ ಗುಂಪಾಗಿ ಹಾಡಿ.
4. ಹಂಪಿಗೆ ಶೈಕ್ಷಣಿಕ ಪ್ರವಾಸವನ್ನು ಕೈಗೊಳ್ಳಿ ಪ್ರವಾಸದ ನಂತರ ನಿಮ್ಮ ಅನುಭವಗಳನ್ನು ಪ್ರಬಂಧ ರೂಪದಲ್ಲಿ ಬರೆಯಿರಿ.

## ಪಾಠ-2: ಬಹಮನಿ ಆದಿಲ್ ಷಾಹಿಗಳು

### ಪಾಠದ ಪರಿಚಯ

ಕರ್ನಾಟಕದ ಇತಿಹಾಸದಲ್ಲಿ ವಿಜಯನಗರ ಸಾಮ್ರಾಜ್ಯವು ಸಾ. ಶ. 1336 ರಲ್ಲಿ ಸ್ಥಾಪನೆಯಾಯಿತು. ತದನಂತರ ಸಾ. ಶ. 1347 ಆಗಸ್ಟ್ 3 ರಂದು ಅಸ್ತಿತ್ವಕ್ಕೆ ಬಂದ ಪ್ರಥಮ ಮುಸ್ಲಿಂ ಸಂತತಿ ಬಹಮನಿ ಸಾಮ್ರಾಜ್ಯವಾಗಿದೆ. ಅಲ್ಲಾವುದ್ದೀನ್ ಹಸನ್ ಗಂಗೂ ಬಹಮನ್ ಷಾ ಈ ಮನೆತನದ ಸ್ಥಾಪಕ. ಬಹಮನಿ ಸುಲ್ತಾನರು ಮತ್ತು ವಿಜಯನಗರದ ಅರಸರ ನಡುವೆ ನಿರಂತರ ಯುದ್ಧಗಳು ನಡೆಯುತ್ತಿದ್ದವು. ಕಾಲಗತಿಯಲ್ಲಿ ಅಧಿಕಾರಕ್ಕಾಗಿ ಬಹಮನಿ ರಾಜ್ಯದಲ್ಲಿ ಅಂತಃಕಲಹಗಳು ನಡೆದು ಅದು ಸಾ. ಶ 1527 ರ ಹೊತ್ತಿಗೆ ಐದು ಷಾಹಿ ಮನೆತನಗಳು ಅಸ್ತಿತ್ವಕ್ಕೆ ಬಂದವು. ಅವುಗಳಲ್ಲಿ ವಿಜಯಪುರದ ಆದಿಲ್ ಷಾಹಿಗಳು ಪ್ರಮುಖರಾದವರು. ಈ ಮನೆತನದ ಪ್ರಮುಖ ಸುಲ್ತಾನರ ಸಾಧನೆಗಳನ್ನು ಪರಿಚಯಿಸಲಾಗಿದೆ. ಇದರ ಜೊತೆಗೆ ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದರು.

ಈ ಪಾಠದಲ್ಲಿ ಬಹಮನಿ ರಾಜ್ಯದ ಸುಲ್ತಾನ ಫಿರೋಜ್ ಷಾ ಹಾಗೂ ಪ್ರಸಿದ್ಧ ಮುಖ್ಯಮಂತ್ರಿ ಮಹಮದ್‌ಗವಾನ್‌ನ ಸಾಧನೆಗಳನ್ನು ವಿವರಿಸಲಾಗಿದೆ. ಇದರೊಂದಿಗೆ ಬಹಮನಿ ರಾಜ್ಯದ ಪ್ರಮುಖ ಕೊಡುಗೆಗಳನ್ನು ವಿವರಿಸಲಾಗಿದೆ.

### ಸಾಮರ್ಥ್ಯಗಳು

1. ಫಿರೋಜ್ ಷಾ ಮತ್ತು ಮಹಮದ್ ಗವಾನ್ ಇವರ ಕೊಡುಗೆಗಳನ್ನು ತಿಳಿಯುವುದು.
2. ಬಹಮನಿ ಸುಲ್ತಾನರ ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪಕ್ಕೆ ನೀಡಿರುವ ಪ್ರಮುಖ ಕೊಡುಗೆಗಳನ್ನು ಗುರುತಿಸುವುದು.
3. ಭೂಪಟದಲ್ಲಿ ಬಹಮನಿ ರಾಜ್ಯಕ್ಕೆ ಸಂಬಂಧಿಸಿದ ಮುಖ್ಯ ಐತಿಹಾಸಿಕ ಸ್ಥಳಗಳನ್ನು ಗುರುತಿಸುವುದು.
4. ವಿಜಯಪುರ ಆದಿಲ್ ಷಾಹಿಗಳಲ್ಲಿ ಪ್ರಮುಖ ಸುಲ್ತಾನರ ಬಗೆಗೆ ಅರಿಯುವುದು.
5. ಕಲೆ, ಸಾಹಿತ್ಯ, ವಾಸ್ತು ಶಿಲ್ಪಗಳನ್ನು ಕುರಿತು ತಿಳಿಯುವುದು.

ವಿಜಯನಗರ ಸಾಮ್ರಾಜ್ಯವು ಆರಂಭವಾದ ಕಾಲದಲ್ಲಿಯೇ ಆ ರಾಜ್ಯದ ಉತ್ತರ ಭಾಗದಲ್ಲಿ ಬಹಮನಿ ಸಾಮ್ರಾಜ್ಯವು 1347 ರಲ್ಲಿ ಸ್ಥಾಪನೆಯಾಯಿತು. ಇದರ ಸ್ಥಾಪಕ 'ಅಲ್ಲಾವುದ್ದಿನ್ ಹಸನ್ ಗಂಗು ಬಹಮನ್ ಷಾ'. ಬಹಮನ್ ಷಾ ಈ ಮೊದಲು ದೆಹಲಿಯ ಸುಲ್ತಾನನಾದ ಮಹಮ್ಮದ್ ಬಿನ್ ತುಘಲಕನ ಸೈನ್ಯದಲ್ಲಿ ಕಾರ್ಯನಿರ್ವಹಿಸುತ್ತಿದ್ದನು.

## ಬಹಮನಿ ಸುಲ್ತಾನರು (ಸಾ. ಶ. 1347 ರಿಂದ 1527)

ಬಹಮನಿ ರಾಜ್ಯವು ಈಗಿನ ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶ (ತೆಲಂಗಾಣ) ಭಾಗಗಳನ್ನು ಒಳಗೊಂಡಿತ್ತು. ಕೃಷ್ಣಾ ನದಿ ರಾಜ್ಯದ ದಕ್ಷಿಣದ ಗಡಿಯಾಗಿತ್ತು. ಪ್ರಾರಂಭದಲ್ಲಿ ಕಲಬುರಗಿ ಅನಂತರ ಬೀದರ್ ಅದರ ರಾಜಧಾನಿಯಾಗಿತ್ತು. ಕೃಷ್ಣಾ ನದಿಯ ಉತ್ತರದಲ್ಲಿ ಬಹಮನಿ ಸಾಮ್ರಾಜ್ಯವಿದ್ದರೆ, ದಕ್ಷಿಣದಲ್ಲಿ ವಿಜಯನಗರ ಸಾಮ್ರಾಜ್ಯವಿದ್ದಿತು. ತಾಜುದ್ದೀನ್ ಫಿರೋಜ್ ಷಾ ಬಹಮನಿ ವಂಶದಲ್ಲಿ ಪ್ರಸಿದ್ಧನಾದ ಸುಲ್ತಾನ.




## ತಾಜುದ್ದೀನ್ ಫಿರೋಜ್ ಷಾ (ಸಾ. ಶ. 1397-1422)

ಈತನು ನ್ಯಾಯಪರ, ಉದಾರಿ ಹಾಗೂ ದೈವಭಕ್ತನಾಗಿದ್ದನು. ಕುರಾನಿನ ಪ್ರತಿಗಳನ್ನು ತಯಾರಿಸಿ ತನ್ನ ಜೀವನಾಂಶ ಸಂಪಾದಿಸುತ್ತಿದ್ದನು. ಲೇಖಕನೂ, ಬಹುಭಾಷಾ ವಿಶಾರದನೂ ಆಗಿದ್ದ ಫಿರೋಜ್ ಷಾನಿಗೆ ಜ್ಯಾಮಿತಿ ಮತ್ತು ಧರ್ಮಶಾಸ್ತ್ರಗಳಲ್ಲಿ ಪರಿಣತಿ ಇತ್ತು. ಈತನು ಅನೇಕ ಪಂಡಿತರಿಗೆ, ಕವಿಗಳಿಗೆ, ಕಲಾವಿದರಿಗೆ ತನ್ನ ಆಸ್ಥಾನದಲ್ಲಿ (ದರ್ಬಾರ) ಆಶ್ರಯ ನೀಡಿ ಗೌರವಿಸುತ್ತಿದ್ದನು. ದೌಲತಾಬಾದ್‌ನಲ್ಲಿ (ಮಹಾರಾಷ್ಟ್ರ) ಆಕಾಶ ವೀಕ್ಷಣಾಲಯವನ್ನು ಸ್ಥಾಪಿಸಿದ್ದನು. ರಾಜಧಾನಿ ಕಲಬುರಗಿಯ ಸೌಂದರ್ಯವನ್ನು ಹೆಚ್ಚಿಸಿದನು. ಅಲ್ಲದೆ ತನ್ನ ಹೆಸರಿನಲ್ಲಿ ಭೀಮಾ ನದಿಯ ದಂಡೆಯ ಬದಿಯಲ್ಲಿ "ಫಿರೋಜಾಬಾದ್" ಎಂಬ ಹೊಸ ನಗರವನ್ನು ಕಟ್ಟಿಸಿದನು. ಇವನ ಕಾಲದಲ್ಲಿ ರಾಜ್ಯಕ್ಕೆ ಬಂದಿದ್ದ ಸೂಫಿಸಂತ ಬಂದೇನವಾಜರಿಗೆ

ಹಲವು ಗ್ರಾಮಗಳನ್ನು ಉಂಬಳಿಯಾಗಿ ನೀಡಿದನು. ಬಂದರುಗಳ ವಿಕಾಸಕ್ಕೆ ವಿಶೇಷ ಗಮನವಿತ್ತನು. ಇದರಿಂದ ವಿದೇಶಿ ಪ್ರವಾಸಕ್ಕೆ ಪ್ರೋತ್ಸಾಹ ಸಿಕ್ಕಿತು.

### ಮಹಮದ್ ಗವಾನ್ ( ಸಾ. ಶ. 1463-1481)

ಬಹಮನಿ ರಾಜ್ಯವನ್ನು ಉನ್ನತ ಮಟ್ಟಕ್ಕೆ ಕೊಂಡಯ್ದು ಕೀರ್ತಿ ಮಹಮದ್ ಗವಾನ್‌ನಿಗೆ ಸಲ್ಲುತ್ತದೆ. ಪರ್ಷಿಯನ್ ಮೂಲದವನಾದ ಗವಾನನು 3 ನೇ ಮಹಮದ್ ಷಾ ಸುಲ್ತಾನನ ಮುಖ್ಯಮಂತ್ರಿಯಾಗಿ ನಿಸ್ವಾರ್ಥ ಸೇವೆ ಸಲ್ಲಿಸಿದನು.

## ಪ್ರಮುಖ ಬಹಮನಿ ಸುಲ್ತಾನರು

ಅಲ್ಲಾವುದ್ದೀನ್ ಹಸನ್ ಗಂಗೂ ಬಹಮನ್ ಷಾ, ಫಿರೋಜ್ ಷಾ, ಅಹಮದ್ ಷಾ, ಮತ್ತು 3 ನೇ ಮಹಮದ್ ಷಾ ಪ್ರಮುಖಾಂಶಗಳು

1. ಮಹಮದ್‌ಗವಾನನು ವಿಜಯನಗರ ಸಾಮ್ರಾಜ್ಯದಿಂದ ಹುಬ್ಬಳ್ಳಿ, ಬೆಳಗಾವಿ ಮತ್ತು ಗೋವಾ ಪ್ರದೇಶಗಳನ್ನು ವಶಪಡಿಸಿಕೊಂಡನು.
2. ಆಡಳಿತವು ಇಸ್ಲಾಮೀ ಕಾನೂನುಗಳನ್ನು ಆಧರಿಸಿತ್ತು.
3. ಕಂದಾಯ ಮತ್ತು ಅಂಚೆ ವ್ಯವಸ್ಥೆಯನ್ನು ಚುರುಕುಗೊಳಿಸಿದನು.
4. ಭೂಮಿಯ ಫಲವತ್ತತೆ, ನೀರಾವರಿ ಸೌಲಭಗಳನ್ನು ಗಮನಿಸಿ, ಭೂಮಾಪನ ಮಾಡಿ ಕಂದಾಯವನ್ನು ನಿಗದಿ ಮಾಡಿದನು. ಕಂದಾಯವನ್ನು ನಗದು ರೂಪದಲ್ಲಿ ಮಾತ್ರ ಸಂಗ್ರಹಿಸಲಾಗುತ್ತಿತ್ತು.
5. ಜನರಿಗೆ ಕಿರುಕುಳ ಕೊಡುವ ತೆರಿಗೆಗಳನ್ನು ರದ್ದುಪಡಿಸಿದನು.
6. ಸ್ವಂತ ವಿದ್ವಾಂಸನಾಗಿದ್ದ ಮಹಮದ್ ಗವಾನ್ ಬೀದರ್ನಲ್ಲಿ ಮದರಸಾ (ಮಹಾವಿದ್ಯಾಲಯ) ಸ್ಥಾಪಿಸಿದನು. ಇದು ಇಸ್ಲಾಂ ಧರ್ಮ ಮತ್ತು ಕಾನೂನು ಶಿಕ್ಷಣವನ್ನು ಪ್ರೋತ್ಸಾಹಿಸಿತು. ಇಲ್ಲಿ ಖಗೋಳಶಾಸ್ತ್ರ, ಗಣಿತ, ಇತಿಹಾಸ ಮುಂತಾದವುಗಳ ಅಧ್ಯಯನ ಕೂಡ ನಡೆಯುತ್ತಿದ್ದವು. ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣ ಹಾಗೂ ವಿದ್ಯಾರ್ಥಿ ನಿಲಯದ ಸೌಕರ್ಯಗಳಿದ್ದವು. ಮದರಸಾ ಗ್ರಂಥಾಲಯದಲ್ಲಿ ಸುಮಾರು 3,000 ಹಸ್ತ ಪ್ರತಿಗಳಿದ್ದವು.
7. ಒಟ್ಟಿನಲ್ಲಿ ಬಹಮನಿ ರಾಜ್ಯದ ಮುನ್ನಡೆಗೆ ಮಹಮದ್ ಗವಾನ್ ಶ್ರೇಷ್ಠ ಕೊಡುಗೆ ನೀಡಿದನು. ಹೀಗಿದ್ದರೂ ಸ್ಥಳೀಯ ಸರದಾರರು ಗವಾನ್‌ನ ಸಾಧನೆಗಳನ್ನು ಕಂಡು ಮತ್ಸರದಿಂದ ಒಳಸಂಚು ನಡೆಸಿ ಕೊಲ್ಲಿಸಿದರು. ಗವಾನನ ಸಮಾಧಿಯ ಮೇಲೆ "ಮುಗ್ಧ ಗವಾನನನ್ನು ಕೊಲೆ ಮಾಡಲಾಯಿತು" ಎಂಬ ಉಲ್ಲೇಖವಿದೆ.

**ಸಾಂಸ್ಕೃತಿಕ ಕೊಡುಗೆಗಳು:**

ಶಿಕ್ಷಣ: ಬಹಮನಿ ಸುಲ್ತಾನರು ಇಸ್ಲಾಂ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದ್ದರು. ಕುರಾನ್ ಪಠಣವು ಶಿಕ್ಷಣದ ಒಂದು ಭಾಗವಾಗಿತ್ತು. ಇವರ ಕಾಲದಲ್ಲಿ ಕಲಬುರಗಿ, ಬೀದರ್, ಎಲಿಚಪುರ ಮತ್ತು ದೌಲತಾಬಾದ್ ಮುಂತಾದವುಗಳು ಇಸ್ಲಾಮಿ ವಿದ್ಯಾಕೇಂದ್ರಗಳಾಗಿದ್ದವು. ಧಾರ್ಮಿಕ ಶಿಕ್ಷಣವನ್ನು ಮಸೀದಿಗಳಲ್ಲಿ ಮತ್ತು ಮದರಸಾಗಳಲ್ಲಿ ನೀಡುತ್ತಿದ್ದರು. ಬಡವರಿಗಾಗಿ ಮತ್ತು ಅನಾಥರಿಗಾಗಿ ಮದರಸಾಗಳಲ್ಲಿ ಉಚಿತ ಊಟ ಮತ್ತು ವಸತಿ ಸೌಕರ್ಯಗಳನ್ನು ಮತ್ತು ವಿದ್ಯಾರ್ಥಿ ವೇತನವನ್ನು ಕಲ್ಪಿಸಿದರು. ಶಾಲೆಗಳಲ್ಲಿ ಕುರಾನ್, ತರ್ಕಶಾಸ್ತ್ರ ಮತ್ತು ಸೂಫೀ ಪಂಥದ ತತ್ವಗಳನ್ನು ಬೋಧಿಸಲಾಗುತ್ತಿತ್ತು.

ಸಾಹಿತ್ಯ: ಬಹಮನಿ ಸುಲ್ತಾನರು ಸಾಹಿತ್ಯದ ಮಹಾಪೋಷಕರಾಗಿ ಕವಿಗಳಿಗೆ, ವಿದ್ವಾಂಸರಿಗೆ, ಬರಹಗಾರರಿಗೆ ರಾಜಾಶ್ರಯವನ್ನು ನೀಡಿದ್ದರು. ಸುಲ್ತಾನರಾದ ಫಿರೋಜ್ ಷಾ, ಎರಡನೇ ಮಹಮದ್ ಷಾ ಮತ್ತು ಮಹಮೂದ್ ಗವಾನ್ ಬರಹಗಾರರು ಮತ್ತು ಮಂತ್ರಿ ಕವಿಗಳೂ ಆಗಿದ್ದರು. ಇವರ ಕಾಲಾವಧಿಯಲ್ಲಿ ಪರ್ಷಿಯನ್, ಅರೇಬಿಕ್, ಉರ್ದು ಸಾಹಿತ್ಯ ಬೆಳವಣಿಗೆಯಾಯಿತು. ಬಂದೇನವಾಜ್ ಎಂಬ ಖ್ಯಾತ ಸೂಫಿ ಸಂತ ಹಾಗೂ ಗ್ರಂಥಕಾರ ಇದೇ ಕಾಲದವರು. ಇವರು ಮತ್ತು ಇನಿತರ ವಿದೇಶಿ ವಿದ್ವಾಂಸರು ಬಳಸಿದ ಭಾಷೆ 'ದಖನಿ' ಎಂದು ಪ್ರಸಿದ್ಧವಾಯಿತು. ಮುಂದೆ ಇದೇ ಉರ್ದು ಭಾಷೆಯ ಬೆಳವಣಿಗೆಗೆ ಕಾರಣವಾಯಿತು.

ವಾಸ್ತುಶಿಲ್ಪ: ಬಹಮನಿಗಳ ಇತಿಹಾಸವು ವಾಸ್ತುಶಿಲ್ಪಕ್ಕೆ ಹೆಸರುವಾಸಿಯಾಗಿದೆ. ಅವರ ಕಲಬುರಗಿ, ಬೀದರ್ ಮತ್ತು ಇತರ ಸ್ಥಳಗಳಲ್ಲಿನ ಅವರ ಕಟ್ಟಡಗಳು ಹಿಂದೂ-ಮುಸ್ಲಿಂ ಶೈಲಿಯಲ್ಲಿವೆ. ಇದು ದಖನಿ ಶೈಲಿಯೆಂದು ಪರಿಚಿತವಾಗಿದೆ. ಬಹಮನಿಗಳ ಮೊದಲ ರಚನೆಯೆಂದರೆ ಕಲಬುರಗಿಯ ಜಾಮೀ ಮಸೀದಿ. ಇದು ಮಹಮದ್ ಷಾನ ರಚನೆ. ಚಿಕ್ಕ ಚಿಕ್ಕ ಗುಮ್ಮಟಗಳಿಂದ ಕೂಡಿರುವ ಇಲ್ಲಿನ ಸಭಾಂಗಣ ಆಕರ್ಷಕವಾಗಿದೆ. ಕಲಬುರಗಿಯ ಬಳಿ ಸುಲ್ತಾನರ ಸಮಾಧಿಗಳಿವೆ. ಅವು ಬೃಹತ್ ಗಾತ್ರದ ಗುಮ್ಮಟಗಳುಳ್ಳ ರಚನೆಗಳು. ಬಂದೇನವಾಜರ ಸಮಾಧಿ ಕಲಬುರಗಿಯ ಇನ್ನೊಂದು ಪ್ರಮುಖ ರಚನೆ.

ಬೀದರ್‌ನ ಸೋಲಾಖಾಂಬ್ ಮಸೀದಿ ಮತ್ತು ಕೋಟೆಯೊಳಗಿನ ಸುಂದರ ಅರಮನೆಗಳು ಪ್ರಸಿದ್ಧವಾಗಿವೆ. ಈ ಕಟ್ಟಡಗಳು ಅಲಂಕಾರ, ಕೆತ್ತನೆ, ಮರದ ಕುಸರಿ ಕೆಲಸಗಳನ್ನು ಹೊಂದಿವೆ. ಬೀದರ್ ಬಳಿಯ ಅಷ್ಟೂರಿನ ಹನ್ನೆರಡು ಸಮಾಧಿಗಳು ಗಮನಾರ್ಹವಾಗಿವೆ.

ಬಹಮನಿ ಕಾಲದ ಕಟ್ಟಡಗಳಲ್ಲಿ ಅತ್ಯಂತ ಪ್ರಮುಖ ರಚನೆಯೆಂದರೆ ಮಹಮದ್ ಗವಾನನು ಕಟ್ಟಿಸಿದ ಮದರಸ. ಇದು 242 ಅಡಿ ಉದ್ದ 222 ಅಡಿ ಅಗಲವಿದ್ದು 56 ಅಡಿ ಎತ್ತರವಾಗಿದ್ದು 3 ಅಂತಸ್ತಿನ (ಮಾಳಿಗೆಯ) ರಚನೆಯಾಗಿದೆ. ಐದು ಶತಮಾನಕ್ಕೂ ಹಿಂದಿನ ಮದರಸ ಕಟ್ಟಡ ತನ್ನ ಘನತೆಯನ್ನು ಸಾರಿ ಹೇಳುವಂತಿದೆ.



## ಷಾಹಿ ಮನೆತನಗಳು

ಮಹಮದ್ ಗವಾನ್‌ನ ನಂತರ ಬಹಮನಿ ರಾಜ್ಯ ಹೆಚ್ಚು ಕಾಲ ಉಳಿಯಲಿಲ್ಲ. 3 ನೇ ಮಹಮದ್ ನಂತರ ಅಧಿಕಾರಕ್ಕೆ ಬಂದ ಸುಲ್ತಾನರು ತೀರ ಅಸಮರ್ಥರಾಗಿದ್ದರು. ಈತನ ನಂತರ ಉತ್ತರಾಧಿಕಾರಿಯಾದ ಮಹಮದ್ ಬಾಲಕನಾಗಿದ್ದು, ರಾಜ್ಯದ ಐಕ್ಯತೆಯನ್ನು ಕಾಪಾಡುವಲ್ಲಿ ವಿಫಲನಾದನು. ಈ ವಂಶದ ಕೊನೆಯ ಸುಲ್ತಾನ ಕಲಿಮುಲ್ಲಾ ಷಾ. ಇವನ ಮರಣದ ನಂತರ ಬಹಮನಿ ರಾಜ್ಯ ಐದು ಷಾಹಿ ರಾಜ್ಯಗಳಾಗಿ ಒಡೆದು ಹೋಯಿತು.

1. ವಿಜಯಪುರ (ಬಿಜಾಪುರ) ದ ಆದಿಲ್ ಷಾಹಿ.
2. ಬೀದರ್‌ನ ಬರೀದ್ ಷಾಹಿ
3. ಗೋಲ್ಕಂಡದ ಕುತುಬ್ ಷಾಹಿ
4. ಅಹಮದ್ ನಗರದ ನಿಜಾಂ ಷಾಹಿ
5. ಬೀರಾರನ ಇಮಾದ್ ಷಾಹಿ

## ವಿಜಯಪುರ(ಬಿಜಾಪುರ)ದ ಆದಿಲ್ ಷಾಹಿಗಳು (ಸಾ. ಶ. 1489-1686)

1. ಯೂಸೂಫ್ ಆದಿಲ್ ಖಾನ್ (ಸಾ. ಶ. 1489-1510)
2. ಇಸ್ಮಾಯಿಲ್ ಆದಿಲಾ ಖಾನ್ (ಸಾ. ಶ. 1510-1534)
3. ಒಂದನೇ ಇಬ್ರಾಹಿಂ ಆದಿಲ್ ಷಾ (ಸಾ. ಶ. 1535-1558)
4. ಒಂದನೇ ಅಲಿ ಆದಿಲ್ ಷಾ (ಸಾ. ಶ. 1558-1580)
5. ಎರಡನೇ ಇಬ್ರಾಹಿಂ ಆದಿಲ್ ಷಾ (ಸಾ. ಶ. 1580-1626)
6. ಮಹಮದ್ ಆದಿಲ್ ಷಾ (ಸಾ. ಶ. 1626-1656)

7. ಎರಡನೇ ಅಲಿ ಆದಿಲ್ ಷಾ (ಸಾ. ಶ. 1656-1672)

8. ಸಿಕಂದರ್ ಆದಿಲ್ ಷಾ (ಸಾ. ಶ. 1672-1686)

ಯೂಸೂಫ್ ಆದಿಲ್ ಖಾನ್‌ನು ವಿಜಯಪುರದ ಆದಿಲ್ ಷಾಹಿ ಮನೆತನದ ಸ್ಥಾಪಕನಾಗಿದ್ದನು. ಈತನು ಒಳ್ಳೆಯ ಆಡಳಿತಗಾರ ಮತ್ತು ಧರ್ಮ ಸಹಿಷ್ಣುವಾಗಿದ್ದನು. ಇವನ ಆನಂತರ ಎರಡನೇ ಇಬ್ರಾಹಿಂ ಆದಿಲ್ ಷಾ ಅಧಿಕಾರಕ್ಕೆ ಬಂದನು.

## ಎರಡನೇ ಇಬ್ರಾಹಿಂ ಆದಿಲ್ ಷಾ (ಸಾ. ಶ. 1580-1626)

ಎರಡನೇ ಇಬ್ರಾಹಿಂ ವಿಜಯಪುರದ ಸುಲಾನರಲ್ಲಿ ಶ್ರೇಷ್ಠನಾದವನು. ಈತನ ಕಾಲದಲ್ಲಿ ರಾಜ್ಯವು ವಿಸ್ತಾರಗೊಂಡಿತು. ಅಲ್ಲದೆ ಅದು ಸಮೃದ್ಧಿಯನ್ನು ಕಂಡಿತು. ಈತನಿಗೆ 'ಜಗದ್ಗುರು ಬಾದಾ ಷಾ' ಎಂಬ ಬಿರುದು ಇತ್ತು. ಇಬ್ರಾಹಿಂ ಧರ್ಮ ಸಹಿಷ್ಣು ಸುಲಾನನಾಗಿದ್ದನು. ಅನೇಕ ಹಿಂದೂ ವಿದ್ವಾಂಸರು, ಕವಿಗಳು, ಮತ್ತು ಸಂಗೀತಗಾರರಿಗೆ ಆಶ್ರಯ ನೀಡಿದ್ದನು. ತನ್ನ ಅರಮನೆ ಕೋಟೆಯಲ್ಲಿನ ದತ್ತ ದೇವಾಲಯಗಳನ್ನು ದುರಸ್ತಿ ಮಾಡಿಸಿ ಪೂಜೆಗೆ ವ್ಯವಸ್ಥೆ ಮಾಡಿದ್ದನು.

ಹಿಂದೂ-ಮುಸ್ಲಿಂ ಸಾಂಸ್ಕೃತಿಕ ಏಕತೆಗಾಗಿ ಇಬ್ರಾಹಿಂ ಶ್ರಮಿಸಿದನು. ಉರ್ದು ಭಾಷೆಯಲ್ಲಿ "ಕಿತಾಬ್-ಇ- ನವರಸ್" ಎಂಬ ಪುಸ್ತಕವನ್ನು ಬರೆದು ಸಂಗೀತವನ್ನು ಮುಸಲ್ಮಾನರಲ್ಲಿ ಜನಪ್ರಿಯಗೊಳಿಸಲು ಯತ್ನಿಸಿದನು. ಈ ಕೃತಿ ಹಿಂದೂ ದೇವತೆಗಳಾದ ಸರಸ್ವತಿ, ಗಣಪತಿ, ಭೈರವ ಮುಂತಾದವರ ಸ್ತುತಿಯಿಂದ ಆರಂಭವಾಗುತ್ತದೆ. ಇವನು ಸ್ವತಃ ಒಳ್ಳೆಯ ಸಂಗೀತಗಾರನಾಗಿದ್ದನು. ಭವ್ಯ ವಾಸ್ತುಶಿಲ್ಪವಾದ 'ಇಬ್ರಾಹಿಂ ರೋಜಾ' ಇವನದೇ ರಚನೆಯಾಗಿದೆ.



## ಬೀದರ್ ಬರೀದ್ ಷಾಹಿ (ಸಾ. ಶ. 1489-1619)

ಬಹಮನಿ ರಾಜ್ಯ ಹರಿದು ಹಂಚಿ ಹೋದಾಗ ದಖನ್ನಿನ ಬೀದರ್ ಮತ್ತು ಸುತ್ತ ಮುತ್ತಲಿನ ಪ್ರದೇಶಗಳನ್ನು ಆಳಿದವರು ಬರೀದ್ ಷಾಹಿ ಮನೆತನದವರು. ಖಾಸಿಂಬರೀದ್ ಎಂಬುವನು ಈ ಮನೆತನದ ಸ್ಥಾಪಕನಾಗಿದ್ದನು. ಈತನ ನಂತರ ಬೀದರನ್ನು ಆಳ್ವಿಕೆ ಮಾಡಿದ ಇಬ್ರಾಹಿಮ್ ಮತ್ತು ಆತನ ತಮ್ಮ ಖಾಸೀಮರು ಅಸಮರ್ಥರಾಗಿದ್ದರು. ಇವರ ಕಚ್ಚಾಟದಿಂದ ಬರೀದ್ ಷಾಹಿ ಮನೆತನವು ಅವನತಿಯತ್ತ ಸಾಗುವಂತಾಯಿತು. ಇಂತಹ ಸಮಯದಲ್ಲಿ

ವಿಜಯಪುರದ ಇಬ್ರಾಹಿಮ್ ಆದಿಲ್ ಷಾ ಬೀದರನ್ನು ವಶಪಡಿಸಿಕೊಂಡನು. ಹೀಗೆ ಬರೀದ್ ಷಾಹಿ ರಾಜ್ಯ ಇಬ್ರಾಹಿಮ್‌ನ ವಿಜಯಪುರ ರಾಜ್ಯದಲ್ಲಿ ವಿಲೀನವಾಯಿತು

### ಗೋಲ್ಕಂಡದ ಕುತಬ್ ಷಾಹಿ (ಸಾ. ಶ. 1512-1687)

ಖುಲಿಕುತುಬ್ ಷಾ: ಈತನು ಸ್ವತಂತ್ರ ಗೋಲ್ಕಂಡ ರಾಜ್ಯದ ಸ್ಥಾಪಕನಾಗಿದ್ದಾನೆ. ಇವನು ಸುದೀರ್ಘಕಾಲ ಉತ್ತಮ ಆಳ್ವಿಕೆಯನ್ನು ನಡೆಸಿ ಸಾ. ಶ. 1543 ರಲ್ಲಿ ತನ್ನೊಬ್ಬ ಮಗನಿಂದಲೇ ಕೊಲೆಯಾದನು.

**ಇಬ್ರಾಹಿಂ**

ಈತನು ಹಿಂದೂ ಧರ್ಮದ ಬಗ್ಗೆ ಅತ್ಯಂತ ಸಹಾನುಭೂತಿಯುಳ್ಳವನಾಗಿದ್ದನು. ಈತನ ಆಸ್ಥಾನದಲ್ಲಿ ಹಿಂದೂಗಳೇ ಅತಿ ಹೆಚ್ಚಿನ ಸಂಖ್ಯೆಯ ಆಡಳಿತಾಧಿಕಾರಿಗಳಾಗಿದ್ದರು. ಈತನು ತನ್ನ ಆಳ್ವಿಕೆಯಲ್ಲಿ ರಾಜಧಾನಿಯಾದ ಗೋಲ್ಕಂಡವನ್ನು ಒಂದು ಸುಂದರ ನಗರವನ್ನಾಗಿ ನಿರ್ಮಿಸಿದನು. ಸಾ. ಶ. 1589 ರ ವೇಳೆಯಲ್ಲಿ ಇಬ್ರಾಹಿಂನು ತನ್ನ ರಾಜಧಾನಿಯನ್ನು ಗೋಲ್ಕಂಡದಿಂದ ಹೈದ್ರಾಬಾದ್‌ಗೆ ವರ್ಗಾಯಿಸಿದನು. ಇಬ್ರಾಹಿಂನ ನಂತರ ಬಂದ ಅಬ್ದುಲ್ಲಾ ಕುತುಬ್ ಷಾ, ಅಬುಲ್ ಹಸನ್ ಮುಂತಾದ ಸುಲ್ತಾನರು ಅಸಮರ್ಥರಾಗಿದ್ದರಿಂದ ಗೋಲ್ಕಂಡವು ಮೊಗಲ್‌ರಿಗೆ ಶರಣಾಯಿತು.

### ಅಹಮದ್ ನಗರದ ನಿಜಾಮ್ ಷಾಹಿ (ಸಾ. ಶ. 1490-1636)

ಸಾ. ಶ. 1490 ರಲ್ಲಿ ಜುನ್ನಾರಿನ ಪ್ರಾಂತಾಧಿಕಾರಿಯಾಗಿದ್ದ ನಿಜಾಮ್ ಷಾಹಿ ರಾಜವಂಶದ ಮಲ್ಲಿಕ್ ಅಹಮದನು ಸ್ವತಂತ್ರವಾದ ಅಹಮದ್ ನಗರ ರಾಜ್ಯವನ್ನು ಸ್ಥಾಪಿಸಿದನು. ಈತನು ದೌಲತಾಬಾದನ್ನು ತನ್ನ ಅಧೀನಕ್ಕೆ ತೆಗೆದುಕೊಂಡು ರಾಜ್ಯವನ್ನು ವಿಸ್ತರಿಸಿದನು. ಈತನ ನಂತರ ಬುರ್ಹಾನ, ಹುಸೇನ್ ನಿಜಾಮ್ ಷಾ ಮುರ್ತುಜಾ ಹೆಸರಿಗೆ ಮಾತ್ರ ಸುಲ್ತಾನರಾಗಿದ್ದರು. ಚಾಂದ್‌ಬೀಬಿಯ ಮರಣದೊಂದಿಗೆ ಅಹಮದ್ ನಗರ ಪತನವಾಯಿತು. ಕೊನೆಗೆ ಮೊಗಲ್ ದೊರೆ ಷಹಜಹಾನನ ಕಾಲದಲ್ಲಿ ಅಹಮದ್ ನಗರ ಸಂಪೂರ್ಣವಾಗಿ ಮೊಗಲ್ ಸಾಮ್ರಾಜ್ಯದಲ್ಲಿ ಸಾ. ಶ. 1637 ರಲ್ಲಿ ವಿಲೀನವಾಯಿತು.

### ಬೀರಾರ್ ನ ಇಮಾದ್ ಷಾಹಿ (ಸಾ. ಶ. 1490-1580)

ಬಹಮನಿ ಸಾಮ್ರಾಜ್ಯದ ಪತನಾ ನಂತರ ಅಸ್ತಿತ್ವಕ್ಕೆ ಬಂದ ಐದು ದಕ್ಷಿಣ ಸುಲ್ತಾನ್ ರಾಜ್ಯಗಳಲ್ಲಿ ಬೀರಾರ್ನ ಇಮಾದ್ ಷಾಹಿ ಮನೆತನವೂ ಒಂದಾಗಿದೆ. ಇದು ಬೀದರ್ನ ಉತ್ತರದಲ್ಲಿ ವಾರ್ದಾ, ತಪತಿ, ಪೆನ್‌ಗಂಗಾ ಹಾಗೂ ವೈನ್ ಗಂಗಾ ನದಿಗಳ ನಡುವಿನ ಪ್ರದೇಶವಾಗಿದೆ. ಸಾ. ಶ. 1490 ರಲ್ಲಿ ಫತಾ-ಉಲ್ಲಾ ಈ ಮನೆತನವನ್ನು ಸ್ಥಾಪಿಸಿದನು. ಇವರ ರಾಜಧಾನಿ ಎಲಿಚಪುರ. ಇಮಾದ್-ಉಲ್-ಮುಲ್ಕ್ ಎಂಬುದು ಫತಾ ಉಲ್ಲಾನ ಬಿರುದಾಗಿದೆ. ಸಾ. ಶ. 1504 ರಲ್ಲಿ ಈತನ ಮರಣಾ ನಂತರ ಇವನ ಮಗ ಅಲ್ಲಾ-ಉದ್-ದಿನ್ ಇಮಾದ್ ಷಾ ಅಧಿಕಾರಕ್ಕೆ ಬಂದನು. ಈತನು ಸಮರ್ಥ ಸುಲ್ತಾನನಾಗಿರಲಿಲ್ಲ. ನಂತರ ಇವನ

ಮಗ ದರಿಯಾ ಇಮಾದ್ ಷಾ ಅಧಿಕಾರಕ್ಕೆ ಬಂದನು. ಈತನ ಅವಧಿಯಲ್ಲಿಯೂ ನೆರೆ ರಾಜ್ಯಗಳೊಂದಿಗೆ ಬೀರಾರ್ ಕದನ ನಡೆಸುತ್ತಲೇ ಬಂದಿತು.

ದರಿಯಾ ಇಮಾದ್ ಷಾನ ಮರಣಾ ನಂತರ ಆತನ ಮಗನಾದ ಬಾಲಕ ಬುರ್ ಹಾನ್ ಷಾ ಅಧಿಕಾರಕ್ಕೆ ಬಂದನು. ಇವನ ಕಾಲದಲ್ಲಿ ಅಧಿಕಾರವು ವಜೀರನಾದ ತು ಷಾಲ್‌ಖಾನನ ಕೈ ಸೇರಿತು. ಮುಂದೆ ಬೀರಾರ್ ರಾಜ್ಯವು ವಿಜಯಪುರ ಸುಲ್ತಾನರ ವಶವಾಗುವ ಮೂಲಕ ಅಂತ್ಯಗೊಂಡಿತು.

### ಆದಿಲ್ ಷಾಹಿಗಳ ಕೊಡುಗೆಗಳು:

ವಿಜಯಪುರದ ಆದಿಲ್ ಷಾಹಿಗಳು ತಮ್ಮ ಸುಮಾರು 200 ವರ್ಷಗಳ ಆಳ್ವಿಕೆಯಲ್ಲಿ ಶಿಕ್ಷಣ, ಸಾಹಿತ್ಯ, ಸಂಗೀತ, ಚಿತ್ರಕಲೆ ಹಾಗೂ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಗಳಿಗೆ ಅಮೂಲ್ಯ ಕಾಣಿಕೆಗಳನ್ನು ನೀಡಿದ್ದಾರೆ.

ಶಿಕ್ಷಣ: ಆದಿಲ್ ಷಾಹಿಗಳು ಶಿಕ್ಷಣ ಪ್ರೇಮಿಗಳು ಮತ್ತು ಪೋಷಕರೂ ಆಗಿದ್ದರು. ಇವರ ಶಿಕ್ಷಣ ನೀತಿಯು ಇಸ್ಲಾಂ ಸಂಸ್ಕೃತಿಯನ್ನು ಬೆಳೆಸುವುದಾಗಿತ್ತು. ಮುಕ್ತಬ್ (ಮಸೀದಿ) ಮದರಸಾ (ಕಾಲೇಜು) ಶಿಕ್ಷಣದ ಕೇಂದ್ರಗಳಾಗಿದ್ದವು. ಇಲ್ಲಿ ಜ್ಞಾನ, ಧರ್ಮ, ಕಾನೂನು. ಕಾವ್ಯ, ಅಲಂಕಾರಶಾಸ್ತ್ರಗಳನ್ನು ಬೋಧಿಸುತ್ತಿದ್ದರು. ಈ ಶಿಕ್ಷಣ ಸಂಸ್ಥೆಗಳು ರಾಜಾಶ್ರಯ ಪಡೆದಿದ್ದವು.

ಸಾಹಿತ್ಯ: ಆದಿಲ್ ಶಾಹಿಗಳು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಕೊಡುಗೆಯು ಮಹತ್ತರವಾಗಿದೆ. ಕೆಲವರು ಸ್ವಂತ ಕವಿಗಳಾಗಿದ್ದರಿಂದ ಸಾಹಿತ್ಯ ಕ್ಷೇತ್ರವು ಹೆಚ್ಚಿನ ಶ್ರೀಮಂತಿಕೆಯನ್ನು ಪಡೆಯಿತು. ಪರ್ಷಿಯನ್, ಅರೇಬಿಕ್, ಉರ್ದು, ಕನ್ನಡ ಭಾಷೆಗಳಲ್ಲಿ ಅನೇಕ ಕೃತಿಗಳು ರಚನೆಯಾದವು.

ಸಂಗೀತ: ಯೂಸೂಫ್ ಆದಿಲ್ ಷಾ ಮತ್ತು ಎರಡನೇ ಇಬ್ರಾಹಿಂ ಆದಿಲ್ ಷಾರು ಮಹಾನ್ ಸಂಗೀತ ವಿದ್ವಾಂಸರಾಗಿದ್ದರು. ಇಬ್ರಾಹಿಂ ಆದಿಲ್ ಷಾನ "ಕಿತಾಬ್-ಇ-ನವರಸ" ಕೃತಿಯು ಸಂಗೀತ ಕ್ಷೇತ್ರದ ಶ್ರೇಷ್ಠ ಕೃತಿಯಾಗಿದೆ. ಈತನು ಸಂಗೀತ ಶಾಲೆಯನ್ನು ಸ್ಥಾಪಿಸಿದನು. ರಾಜ ವಂಶದ ಮತ್ತು ಶ್ರೀಮಂತವರ್ಗದ ಸ್ತ್ರೀಯರು ಸಂಗೀತದಲ್ಲಿ ಆಸಕ್ತರಾಗಿದ್ದರು.

ವರ್ಣ ಚಿತ್ರಕಲೆ: ಎರಡನೆಯ ಇಬ್ರಾಹಿಂನು ಚಿತ್ರಕಲಾವಿದನೂ ಆಗಿದ್ದನು. ಈತನ ಆಸ್ಥಾನವು ಅನೇಕ ಪರ್ಷಿಯನ್ ಕಲಾವಿದರನ್ನು ಒಳಗೊಂಡಿತ್ತು. ಇವರ ಅರಮನೆ, ಮಸೀದಿಗಳ ಗೋಡೆ, ಮೇಲ್ಛಾವಣಿಗಳ ಮೇಲೆ ಹೂ, ಗಿಡ, ಬಳ್ಳಿ ಮುಂತಾದ ನಿಸರ್ಗದ ಚಿತ್ರಗಳನ್ನು ಸುಂದರವಾಗಿ ಚಿತ್ರಿಸಲಾಗಿದೆ. ಈ ವರ್ಣಚಿತ್ರಗಳು ಅಂದಿನ ಜನರ ಆಸೆ, ಅಭಿರುಚಿ, ಸಂಪ್ರದಾಯಗಳನ್ನು ಅರಿಯಲು ಸಹಾಯಕವಾಗಿವೆ.

ಕಲೆ ಮತ್ತು ವಾಸ್ತುಶಿಲ್ಪ: ಕರ್ನಾಟಕದ ವಾಸ್ತುಶಿಲ್ಪದ ಇತಿಹಾಸದಲ್ಲಿ ವಿಜಯಪುರದ ಆದಿಲ್ ಷಾಹಿಗಳ ನಿರ್ಮಾಣಗಳಿಗೆ ಮಹತ್ವದ ಸ್ಥಾನವಿದೆ. ಅವರ ನಿರ್ಮಾಣಗಳೆಂದರೆ ಕೋಟೆ, ಅರಮನೆ, ಮಸೀದಿ ಮತ್ತು ಸಮಾಧಿಗಳು. ಅವರು ನಿರ್ಮಿಸಿದ ಸ್ಮಾರಕಗಳು ಇಂಡೋ-ಇಸ್ಲಾಮಿಕ್ ಶೈಲಿಯಲ್ಲಿವೆ.

ಎ. ಕೋಟೆ: ವಿಜಯಪುರದ ಕೋಟೆ ಭಾರೀ ರಚನೆಯಾಗಿದ್ದು 96 ಕೊತ್ತಲ (ಕೋಟೆಯ ಪ್ರಾಕಾರದ ಮೇಲೆ ಕಟ್ಟುವ ಗುಮ್ಮಟ) ಹಾಗೂ 6 ಮಹಾದ್ವಾರಗಳನ್ನು ಹೊಂದಿದೆ.

**ಬ. ಅರಮನೆಗಳು:**

ಗಗನ್ ಮಹಲ್: ಸಾ. ಶ. 1620 ರಲ್ಲಿ ಇಬ್ರಾಹಿಂ ಆದಿಲ್ ಷಾ ಕಟ್ಟಿಸಿದನು. ಇದು 3 ಅಂತಸ್ತುಗಳ ಗೋಪುರವನ್ನು ಒಳಗೊಂಡಿದೆ.

ಮೆಹತರ್ ಮಹಲ್: ಇದು ಕೂಡ 3 ಅಂತಸ್ತಿನ ಅರಮನೆಯಾಗಿದೆ. ಇದನ್ನು ಸಹ ಎರಡನೇ ಇಬ್ರಾಹಿಂ ಆದಿಲ್ ಷಾ ನಿರ್ಮಿಸಿದನು. ಇದು ಅತಿ ಸೂಕ್ಷ್ಮ ಅಲಂಕಾರದಿಂದ ಪ್ರಖ್ಯಾತಿ ಹೊಂದಿದೆ. ಇದರ ಜೊತೆಗೆ ಅಸಾರ್ ಮಹಲ್‌ನಲ್ಲಿ ವರ್ಣರಂಜಿತ ಚಿತ್ರಗಳಿರುವ ಕೊಠಡಿಗಳಿವೆ.





**ಕ. ಮಸೀದಿಗಳು:**

ಜಾಮೀ ಮಸೀದಿ: ಇದನ್ನು ಅಲಿ ಆದಿಲ್ ಷಾನು ನಿರ್ಮಾಣ ಮಾಡಿದನು. ಇದು ಭವ್ಯವಾದ ಪ್ರಾರ್ಥನಾ ಭವನಕ್ಕೆ ಹೆಸರುವಾಸಿಯಾಗಿದೆ. ಈ ಭವ್ಯ ಕಟ್ಟಡವು ಅಲಂಕಾರವಿಲ್ಲದೆ ಬಹಳ ಸರಳತೆಯಿಂದ ಕೂಡಿದೆ. ಇದು ಕಲಾ ಸ್ಮಾರಕಗಳಲ್ಲಿ ತನ್ನ ನೂತನ ಶೈಲಿಯನ್ನು ಹೊಂದಿದೆ.

ಇಬ್ರಾಹಿಂ ರೋಜಾ: ಇದನ್ನು ವಿಜಯಪುರದಲ್ಲಿ ಎರಡನೇ ಇಬ್ರಾಹಿಂ ಆದಿಲ್ ಷಾಹ ತನ್ನ ಪತ್ನಿ ತಾಜ್‌ಬೇಗಂಳ ನೆನಪಿಗಾಗಿ ನಿರ್ಮಿಸಿದನು. ಇದರಲ್ಲಿ ಇಬ್ರಾಹಿಂ ಮತ್ತು ಆತನ

ಕುಟುಂಬ ಸದಸ್ಯರ ಸಮಾಧಿಗಳಿವೆ. ಇದು ಭಾರತದಲ್ಲಿರುವ ಏಕೈಕ ರೋಜಾ ಆಗಿರುತ್ತದೆ. ಇದನ್ನು "ದಕ್ಷಿಣ ಭಾರತದ ತಾಜ್‌ಮಹಲ್" ಎಂದು ವರ್ಣಿಸಲಾಗಿದೆ.

ಒಂದು ಎತ್ತರವಾದ ಕಟ್ಟೆಯ ಮೇಲೆ ಗೋರಿ ಮತ್ತು ಮಸೀದಿಯನ್ನು ಕಟ್ಟಿದ್ದು, ಸುತ್ತಲೂ ಉದ್ಯಾನವನ ಹಾಗೂ ಆವರಣ ಗೋಡೆಯನ್ನು ಒಳಗೊಂಡಿರುವುದಕ್ಕೆ ರೋಜಾ ಎಂದು ಕರೆಯುತ್ತಾರೆ.

ಗೋಲಗುಮ್ಮಟ: ರೋಜಾಕ್ಕೂ ಮೀರಿದ ಕಟ್ಟಡವನ್ನು ರಚಿಸಬೇಕೆಂದು ಮಹಮದ್‌ನು ವಿಜಯಪುರದಲ್ಲಿ ಗೋಲಗುಮ್ಮಟ ಎಂಬ ಸಮಾಧಿ ಮಂದಿರವನ್ನು ಸಾ. ಶ. 1656 ರಲ್ಲಿ ನಿರ್ಮಿಸಿದನು. ಇದರ ಕೇಂದ್ರದಲ್ಲಿ ವಿಶಾಲವಾದ ಗುಮ್ಮಟವಿದೆ. ಗುಮ್ಮಟದ ಒಳಭಾಗದಲ್ಲಿ 'ಪಿಸುಗುಟ್ಟುವ' ಮೊಗಸಾಲೆ ಇದೆ. ಇದು ಅಂದಿನ ತಾಂತ್ರಿಕ ಕೌಶಲ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಗೋಲಗುಮ್ಮಟವು ಜಗತ್ತಿನ ನಾಲ್ಕನೇ ದೊಡ್ಡ ಗುಮ್ಮಟವಾದರೆ, ಭಾರತದ ಅತಿ ದೊಡ್ಡ ಗುಮ್ಮಟವಾಗಿದೆ.







ಇತರ ಪ್ರಮುಖ ಸ್ಮಾರಕಗಳು: ಬಾರಾ ಕಮಾನ್, ಬಡೇ ಕಮಾನ್, ಆನಂದಮಹಲ್ ಉಪ್ಲಿಬುರುಜು, ತಾಜ್‌ಬಾವ್ಡಿ ಚಾಂದ ಬಾವ್ಡಿ ಮುಂತಾದವು ಇತರ ಪ್ರಮುಖ ಸ್ಮಾರಕಗಳಾಗಿವೆ.

**ಚಟುವಟಿಕೆ**

1. ಬಹಮನ್ ಷಾಹಿ ಮತ್ತು ಆದಿಲ್ ಷಾಹಿಗಳ ವಾಸ್ತುಶಿಲ್ಪಗಳ ಭಾವಚಿತ್ರಗಳನ್ನು ವಿವರಣೆಯೊಂದಿಗೆ ಸಂಗ್ರಹಿಸಿ ಆಲ್ಬಂ ತಯಾರಿಸಿ.
2. ಭಾರತದಲ್ಲಿರುವ ಹಿಂದೂ ಕ್ರಿಶ್ಚಿಯನ್ ಹಾಗೂ ಮುಸ್ಲಿಂ ಸಂಸ್ಕೃತಿಯ ಕುರುಹುಗಳಾದ ದೇವಸ್ಥಾನಗಳು, ಚರ್ಚುಗಳು ಮತ್ತು ಮಸೀದಿಗಳು ಹಾಗೂ ಇತರ ಸ್ಮಾರಕಗಳ ಚಿತ್ರಗಳನ್ನು ಸಂಗ್ರಹಿಸಿ ಒಂದು ಆಲ್ಬಂ ತಯಾರಿಸಿ.

**ಕಾಲ ಗಣನೆ (ಸಾ. ಶ.)**

1. ಬಹಮನಿ ರಾಜ್ಯದ ಆಳ್ವಿಕೆಯ ಕಾಲ- 1347 ರಿಂದ 1527
2. ಬೀದರ್‌ನಲ್ಲಿ ಮದರಸಾ ಸ್ಥಾಪನೆ- 1461
3. ಆದಿಲ್ ಷಾಹಿಗಳ ಆಳ್ವಿಕೆಯ ಕಾಲ- 1489 ರಿಂದ 1672
4. ಇಬ್ರಾಹಿಂ ರೋಜಾ ರಚನೆ- 1626
5. ಗೋಲಗುಮ್ಮಟದ ರಚನೆ- 1656

ಅಭ್ಯಾಸಗಳು

**I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.**

1. ಬಹಮನಿ ಸಾಮ್ರಾಜ್ಯವು ________ ರಲ್ಲಿ ಸ್ಥಾಪನೆಯಾಯಿತು.
2. ಕಲಬುರಗಿ ________ ಸುಲ್ತಾನರ ರಾಜಧಾನಿಯಾಗಿತ್ತು.
3. ಫಿರೋಜ್ ಷಾ ಸುಲಾನನು ಭೀಮಾ ನದಿಯ ದಂಡೆಯ ಮೇಲೆ ________ ನಗರವನ್ನು ನಿರ್ಮಿಸಿದನು.
4. ಮಹಮದ್ ಗವಾನನು ________ ಅಲ್ಲಿ ಮದರಸವನ್ನು ಕಟ್ಟಿಸಿದನು.
5. ಬರೀದ್ ಷಾಹಿ ಮನೆತನದ ಸ್ಥಾಪಕ ________
6. ಗೋಲ್ಕಂಡದ ಕುತಬ್ ಷಾಹಿ ರಾಜ್ಯದ ಸ್ಥಾಪಕ ________
7. ಇಮಾದ್ ಷಾಹಿ ಮನೆತನದ ಸ್ಥಾಪಕ ________

**II. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಬಹಮನಿ ಮನೆತನದ ಸ್ಥಾಪಕನು ಯಾರು?
2. ಮಹಮದ್ ಗವಾನ್ ಯಾರು?
3. ಸೋಲಾಖಾಂಬ್ ಮಸೀದಿ ಎಲ್ಲಿದೆ?
4. ಆದಿಲ್ ಷಾಹಿ ಸುಲ್ತಾನರಲ್ಲಿ ಗಣ್ಯನು ಯಾರು?
5. ದಕ್ಷಿಣ ಭಾರತದ ತಾಜ್‌ಮಹಲ್ ಎಂದು ಯಾವ ಸ್ಮಾರಕವನ್ನು ಕರೆಯುತ್ತಾರೆ?
6. ಗೋಲಗುಮ್ಮಟ ಏಕೆ ಪ್ರಸಿದ್ಧವಾಗಿದೆ?
7. ಜಗದ್ಗುರು ಬಾದಾ ಷಾ ಎಂಬ ಬಿರುದು ಯಾರಿಗಿತ್ತು?

**III.ಈ ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿ.**

1. ಮಹಮದ್ ಗವಾನನ ಸಾಧನೆಗಳನ್ನು ತಿಳಿಸಿರಿ.
2. ಐದು ಷಾಹಿ ಮನೆತನಗಳನ್ನು ಹೆಸರಿಸಿರಿ.
3. ಎರಡನೇ ಇಬ್ರಾಹಿಂ ಆದಿಲ್ ಷಾ ಧರ್ಮ ಸಹಿಷ್ಣು ಸುಲ್ತಾನನಾಗಿದ್ದನು ಎಂಬುದನ್ನು ಚರ್ಚಿಸಿ.

**IV. ಈ ಕೆಳಗಿನ 'ಎ' ಪಟ್ಟಿಗೆ ಸಂಬಂಧಿಸಿದ 'ಬಿ' ಪಟ್ಟಿಯಲ್ಲಿನ ವಿಷಯಗಳನ್ನು ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| 1. ಆದಿಲ್ ಷಾಹಿ | a. ಅಹಮದ್‌ನಗರ |
| 2. ಕುತಬ್ ಷಾಹಿ | b. ಬೀರಾರ್ |
| 3. ನಿಜಾಮ್ ಷಾಹಿ | c. ವಿಜಯಪುರ |
| 4. ಇಮಾದ್ ಷಾಹಿ | d. ಬೀದರ್ |
| 5. ಬರೀದ್ ಷಾಹಿ | e. ಗೋಲ್ಕಂಡ |

## ಪಾಠ-3: ಭಕ್ತಿ ಪಂಥ ಹಾಗೂ ಸೂಫಿ ಪರಂಪರೆ

### ಪಾಠದ ಪರಿಚಯ

ದಕ್ಷಿಣ ಮತ್ತು ಉತ್ತರ ಭಾರತದಲ್ಲಿ ಆಳ್ವಾರರು, ದಾಸರು ಮತ್ತು ಉತ್ತರ ಭಾರತದಲ್ಲಿ ಸಂತರು, ಸೂಫಿಗಳು ಭಕ್ತಿ ಪಂಥದ ಮೂಲಕ ಸಮಾಜವನ್ನು ಜಾಗೃತಿಗೊಳಿಸಿದರು. ಈ ಪಾಠದಲ್ಲಿ ಭಕ್ತಿ ಪಂಥದ ಆಶಯ, ಅರ್ಥ ಮತ್ತು ಲಕ್ಷಣಗಳನ್ನು ಹೇಳಲಾಗಿದೆ. ದಕ್ಷಿಣ ಭಾರತದಲ್ಲಿನ ಆಂಡಾಳ್, ಅಕ್ಕಮಹಾದೇವಿ, ಕನಕದಾಸರು, ಪುರಂದರದಾಸರು, ಶಿಶುನಾಳ ಶರೀಫರನ್ನು ಪರಿಚಯಿಸಲಾಗಿದೆ. ಅದರಂತೆ ಉತ್ತರ ಭಾರತದಲ್ಲಿನ ಕಬೀರದಾಸ, ಗುರುನಾನಕ್, ತುಳಸೀದಾಸ, ಮೀರಾಬಾಯಿ, ಶ್ರೀಚೈತನ್ಯ ಹಾಗೂ ಸೂಫಿ ಸಂತರನ್ನು ಪರಿಚಯಿಸಲಾಗಿದೆ. ಜೊತೆಗೆ ಭಕ್ತಿಪಂಥವು ವಿಭಿನ್ನ ಧರ್ಮೀಯರ ನಡುವೆ ಸಾಧಿಸಿದ ಸಾಮರಸ್ಯವನ್ನು ಹಾಗೂ ಸ್ಥಳೀಯ ಭಾಷೆಗಳ ಸಂಪನ್ನತೆಗೆ ನೀಡಿದ ಕೊಡುಗೆಗಳನ್ನು ವಿವರಿಸಲಾಗಿದೆ.

### ಸಾಮರ್ಥ್ಯಗಳು

1. ಭಕ್ತಿ ಪಂಥದ ಬೋಧನೆಗಳು ಸಾಮಾಜಿಕ ಸಾಮರಸ್ಯಕ್ಕೆ ನೀಡಿದ ಕೊಡುಗೆಗಳನ್ನು ಅರ್ಥೈಸಿಕೊಳ್ಳುವುದು.
2. ದಾಸರ ಮತ್ತು ಸಂತರ ಬೋಧನೆಗಳನ್ನು ಅರಿತು ಮೈಗೂಡಿಸಿಕೊಳ್ಳುವುದು.
3. ಸೂಫಿಗಳು ಬೋಧಿಸಿದ ವಿಶಿಷ್ಟವಾದ ತತ್ವಗಳನ್ನು ವಿದ್ಯಾರ್ಥಿಗಳಿಗೆ ತಿಳಿಸುವುದು.

ಭಾರತ ಬಹು ಸಂಸ್ಕೃತಿಗಳ ಸಮಾಜವನ್ನು ಒಳಗೊಂಡಿರುವ ದೇಶ. ಈ ಸಮಾಜದಲ್ಲಿ ಜಾತಿ ವ್ಯವಸ್ಥೆ, ಮೌಢ್ಯ, ಕಂದಾಚಾರಗಳು ಮನೆ ಮಾಡಿದ್ದವು. ಜನಸಾಮಾನ್ಯರಿಗೆ 'ಮೋಕ್ಷ' ಎಂಬುದು ಮರೀಚಿಕೆಯಾಗಿತ್ತು. ಅದಕ್ಕೆ ಅವರು ಅರ್ಹರಲ್ಲ ಎಂಬ ಭಾವನೆ ಮಧ್ಯಯುಗದ ಸಮಾಜದಲ್ಲಿತ್ತು. ಅಂತಹ ಸಂದರ್ಭದಲ್ಲಿ ಉದಯಿಸಿದ ಕೆಲವು ಭಕ್ತಿ ಪಂಥ ಮತ್ತು ಸೂಫಿ ಪರಂಪರೆಯ ಸಂತರು ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣೆಗೆ ಮುಂದಾದರು.

ಅವರು ವಿಶ್ವ ಸಹೋದರತೆಗೆ ಮಹತ್ವ ನೀಡಿ, ಮೋಕ್ಷ ಸಾಧನೆಗೆ ಭಕ್ತಿಯು ಉತ್ತಮ ಮಾರ್ಗವೆಂದು ಸಾರಿದರು. ಈ ಸಂಪ್ರದಾಯವನ್ನು ಭಕ್ತಿ ಪಂಥ ಎನ್ನುವರು.

ಭಕ್ತಿ ಎಂಬ ಸಂಸ್ಕೃತ ಪದವು ಭುಜ್ ಎಂಬ ಮೂಲದಿಂದ ಬಂದಿದೆ. ಭುಜ್ ಎಂದರೆ ಜ್ಞಾನ ಎಂದು ಅರ್ಥವಾಗುತ್ತದೆ.

### ಭಕ್ತಿ ಪಂಥದ ಸಾರ

1. ಭಕ್ತಿ ಪಂಥವು ಮೇಲು ಕೀಳು ಎಂಬ ಭೇದಭಾವವನ್ನು ಖಂಡಿಸಿತು. ಸಮಾನತೆಯನ್ನು ಸಾರಿತು.

2. ಭಕ್ತಿಪಂಥದ ಸಂತರು ಕಂದಾಚಾರವನ್ನು ವಿರೋಧಿಸಿ ಅದನ್ನು ಖಂಡಿಸಿದರು.
3. ಇವರು ಜನರ ಹೃದಯವನ್ನು ಬೆಸೆಯುವ ಕಾರ್ಯ ಮಾಡಿದರು.
4. ಸೂಫಿ ಸಂತರು ಧರ್ಮವೆಂದರೆ ಪ್ರೇಮ ಹಾಗೂ ಮಾನವ ಸೇವೆ ಎಂದು ಸಾರಿದರು. ದೇವರು ಒಬ್ಬನೇ ಎಂದು, ಹಲವಾರು ದೇವರುಗಳು ಇಲ್ಲ ಎಂದು ಸಾರಿದರು.

## ದಕ್ಷಿಣ ಭಾರತದ ಭಕ್ತಿ ಪರಂಪರೆ

### ಆಂಡಾಳ್



ತಮಿಳುನಾಡಿನ ವಿಷ್ಣುಭಕ್ತರಾದ 12 ಮಂದಿ ಆಳ್ವಾರ್‌ಗಳಲ್ಲಿ 'ಆಂಡಾಳ್' ಕೂಡಾ ಒಬ್ಬರು. ಇವರು ವಿಷ್ಣುಚಿತ್ತರ ಸಾಕುಮಗಳು. ವಿಷ್ಣುಚಿತ್ತರೂ ಒಬ್ಬ ಆಳ್ವಾರ್. ಇವರನ್ನು ಪೆರಿಯಾಳ್ವಾರ್ ಎಂಬ ಹೆಸರಿನಿಂದ ಕರೆಯುತ್ತಾರೆ. ಆಂಡಾಳ್‌ರ ಮೂಲ ಹೆಸರು ಗೋದಾದೇವಿ. ಇವರು ಕೃಷ್ಣನ ಭಕ್ತರು. ಶ್ರೀವಿಲ್ಲಿಪುತ್ತೂರಿನಲ್ಲಿರುವ ಕೃಷ್ಣದೇವಸ್ಥಾನಕ್ಕೆ ಇವರ ತಂದೆ ಹೂಮಾಲೆ ಮಾಡಿ ದೇವರಿಗೆ ಮುಡಿಸುತ್ತಿದ್ದರು. ಆಂಡಾಳ್‌ರವರು ಕೃಷ್ಣನನ್ನೇ ಪ್ರೇಮಿಸಿ, ಆತನೇ ತನ್ನ ಗಂಡನೆಂದು ಹೇಳುತ್ತಿದ್ದರು. ಇವರು 'ತಿರುಪ್ಪಾವೈ' ಎಂಬ ಗ್ರಂಥ ರಚಿಸಿ ದೇವರಿಗೆ ಸಮರ್ಪಿಸಿದರು. ತಮಿಳುನಾಡಿನಲ್ಲಿ ಈ 'ತಿರುಪ್ಪಾವೈ' ವ್ರತಾಚರಣೆಗೆ ತುಂಬಾ ಪ್ರಸಿದ್ಧಿ ಹೊಂದಿದೆ.

ಆಳ್ವಾರರ ಪ್ರಕಾರ ವಿಷ್ಣುಭಕ್ತರಾದವರೆಲ್ಲರೂ ಸಮಾನರು, ಅವರ ಹುಟ್ಟನ್ನು ಯಾರೂ ಕೇಳಬಾರದು. ಜಾತಿ ಭಾವನೆ ಘೋರಪಾಪವೆಂದು ಇವರು ಭಾವಿಸಿದ್ದರು.

### ಅಕ್ಕಮಹಾದೇವಿ



ಅಕ್ಕಮಹಾದೇವಿ

12 ನೇ ಶತಮಾನದಲ್ಲಿ ವಚನ ಚಳವಳಿಯಲ್ಲಿ ಭಾಗವಹಿಸಿದ ದಿಟ್ಟ ಮಹಿಳೆ ಅಕ್ಕಮಹಾದೇವಿ. ಕನ್ನಡ ವಚನ ಸಾಹಿತ್ಯಕ್ಕೆ ಇವರ ಕೊಡುಗೆ ಅಪಾರವಾಗಿದೆ. ಶಿವಮೊಗ್ಗ ಜಿಲ್ಲೆಯ ಉಡುತಡಿಯಲ್ಲಿ ಅಕ್ಕಮಹಾದೇವಿ ಜನಿಸಿದರು. ಇವರ ತಂದೆ ನಿರ್ಮಲಶೆಟ್ಟಿ, ತಾಯಿ ಸುಮತಿ. ಬಾಲ್ಯದಿಂದಲೇ ಶಿವಭಕ್ತಿಯಲ್ಲಿ ಮುಳುಗಿರುತ್ತಿದ್ದರು. ಅಕ್ಕಮಹಾದೇವಿ ಚೆನ್ನಮಲ್ಲಿಕಾರ್ಜುನನೇ ತನ್ನ ಗಂಡ ಎಂದು ಸಾರಿ ಹೇಳುತ್ತಿದ್ದರು. ಇವರ ತಂದೆ-ತಾಯಿಯರು ಬಲವಂತವಾಗಿ ರಾಜನಾದ ಕೌಶಿಕನೊಂದಿಗೆ ಮದುವೆ ಮಾಡುತ್ತಾರೆ. ತನ್ನ ಗುರು, ಲಿಂಗ, ಜಂಗಮ ಸೇವೆಗೆ ಅಡ್ಡಿಯಾದ್ದರಿಂದ ಅಕ್ಕಮಹಾದೇವಿ ಅರಮನೆ ತ್ಯಜಿಸುತ್ತಾರೆ. ತೊಟ್ಟ ವಸ್ತ್ರಗಳನ್ನು ಬಿಟ್ಟು ಹೊರ ಬರುತ್ತಾರೆ. ನಂತರ ಕಲ್ಯಾಣಕ್ಕೆ ತೆರಳಿ ಬಸವೇಶ್ವರರು ಸ್ಥಾಪಿಸಿದ ಅನುಭವ ಮಂಟಪದಲ್ಲಿ ಕೆಲವು ಕಾಲ ತಂಗುತ್ತಾರೆ. ಅಲ್ಲಿ 'ಚನ್ನಮಲ್ಲಿಕಾರ್ಜುನ' ಎಂಬ ಅಂಕಿತದಲ್ಲಿ ಅನೇಕ ವಚನಗಳನ್ನು ರಚಿಸುತ್ತಾರೆ. ಎಲ್ಲ ಶಿವಶರಣರಿಗೂ ಅಕ್ಕಮಹಾದೇವಿಯ ಬಗೆಗೆ ಅಪಾರ ಗೌರವವಿತ್ತು. ಕೊನೆಯ ದಿನಗಳಲ್ಲಿ ಕಲ್ಯಾಣದಿಂದ ಶ್ರೀಶೈಲಕ್ಕೆ ತೆರಳುತ್ತಾರೆ. ಅಂತಿಮವಾಗಿ ಅಲ್ಲಿನ ಕದಳೀ ವನದಲ್ಲಿ ಶಿವೈಕ್ಯರಾಗುತ್ತಾರೆ.

**ಪುರಂದರ ದಾಸರು (ಸಾ. ಶ. 1480-1564)**



ಇವರು ಕನ್ನಡ ದಾಸ ಸಾಹಿತ್ಯದ ಒಬ್ಬ ಪ್ರಮುಖ ವ್ಯಕ್ತಿಯಾಗಿದ್ದಾರೆ. ಪುರಂದರ ದಾಸರು ಪುರಂದರಗಡದಲ್ಲಿ ಜನಿಸಿದರು. ಇವರ ಮೂಲ ಹೆಸರು ಶ್ರೀನಿವಾಸ ನಾಯಕ. ತಂದೆ ವರದಪ್ಪ ನಾಯಕರು ಮತ್ತು ತಾಯಿ ಲೀಲಾವತಿ. ಇವರ ಪತ್ನಿ ಲಕ್ಷ್ಮೀಬಾಯಿ ಧರ್ಮನಿಷ್ಠ ಸ್ತ್ರೀಯಾಗಿದ್ದಳು.

ಜಿಪುಣನೂ, ನಾಸ್ತಿಕನೂ ಆದ ಶ್ರೀನಿವಾಸ ನಾಯಕ ಭಗವಂತನ ಪರೀಕ್ಷೆಯಲ್ಲಿ ಸೋತು ತನ್ನೆಲ್ಲ ಸಂಪತ್ತನ್ನು ತ್ಯಾಗ ಮಾಡಿ ಪರಮಾತ್ಮನ ನಾಮ ಸ್ಮರಣೆಯಲ್ಲಿ ತೊಡಗಿದರು. ಇವರು ಕೀರ್ತನೆಗಳನ್ನು ಹಾಡುತ್ತ ಅನೇಕ ಊರುಗಳನ್ನು ಸುತ್ತಿ ಕೃಷ್ಣದೇವರಾಯನ ಆಸ್ಥಾನವನ್ನು ಸೇರಿದರು. ಅಲ್ಲಿ ವ್ಯಾಸರಾಯರು ಇವರಿಗೆ ದೀಕ್ಷೆಯನ್ನು ಕೊಟ್ಟು “ಪುರಂದರ” ಎಂದು ನಾಮಕರಣ ಮಾಡಿದರು. ಹೀಗೆ ಪುರಂದರದಾಸರಾದರು. ಪುರಂದರದಾಸರ ಪದಗಳಲ್ಲಿ ಮಾನವೀಯ ಮೌಲ್ಯಗಳು ಅಡಗಿವೆ. ಇವರು ತಮ್ಮ ಕೀರ್ತನೆಗಳಲ್ಲಿ ಮಡಿವಂತಿಕೆಯನ್ನು ಖಂಡಿಸಿದ್ದಾರೆ. ಇವುಗಳಲ್ಲಿ ತತ್ವ, ನೀತಿ ಮತ್ತು ಸಂಗೀತದ ಸಂಗಮವನ್ನು ಕಾಣುತ್ತೇವೆ. ಇವರನ್ನು “ಕರ್ನಾಟಕ ಸಂಗೀತ ಪಿತಾಮಹ” ಎಂದು ಕರೆಯುತ್ತಾರೆ. ‘ಪುರಂದರ ವಿಠ್ಠಲ’ ಎಂಬ ಅಂಕಿತದಿಂದ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. “ದಾಸರೆಂದರೆ ಪುರಂದರ ದಾಸರಯ್ಯಾ” ಎಂದು ತಮ್ಮ ಗುರುಗಳಾದ ವ್ಯಾಸರಾಯರಿಂದ ಹೊಗಳಿಸಿಕೊಂಡಿದ್ದಾರೆ.

**ಕನಕದಾಸರು (ಸುಮಾರು ಸಾ. ಶ. 1508-1606)**




ದಾಸ ಸಾಹಿತ್ಯದ ಒಬ್ಬ ಪ್ರಮುಖ ಕೀರ್ತನಕಾರರಾಗಿದ್ದ ಕನಕದಾಸರು ಸುಮಾರು ಸಾ. ಶ. 1508 ರಲ್ಲಿ ಹಾವೇರಿ ಜಿಲ್ಲೆಯ ಬಂಕಾಪುರ ತಾಲೂಕಿನ ಬಾಡ ಗ್ರಾಮದಲ್ಲಿ ಜನಿಸಿದರು. ಇವರ ಮೂಲ ಹೆಸರು ತಿಮ್ಮಪ್ಪ. ಬೀರಪ್ಪ ಮತ್ತು ಬಚ್ಚಮ್ಮ ಇವರ ತಂದೆ ತಾಯಿಗಳು. ಇವರು ಕಲಿಯೂ ಹೌದು, ಕವಿಯೂ ಹೌದು. ಬಾಡಗ್ರಾಮದ ಸುತ್ತಲಿನ 78 ಗ್ರಾಮಗಳಿಗೆ ನಾಡಗೌಡ ಹಾಗೂ ಢಣಾಯಕರಾಗಿದ್ದರು. ಕೊಪ್ಪರಿಗೆ ತುಂಬಿದ ಕನಕ ದೊರೆಯಲಾಗಿ ಕನಕನಾಯಕ ಆದರೆಂದು ಪ್ರತೀತಿ. ಕೌಟುಂಬಿಕ ಜೀವನದಲ್ಲಿ ವೈರಾಗ್ಯ ಉದಯಿಸಿ, ವ್ಯಾಸರಾಯರ ಶಿಷ್ಯರಾದರು. ಮುಂದೆ ಕನಕದಾಸರೆಂದೆನಿಸಿದರು. ಇವರು ಅನೇಕ ಕೀರ್ತನೆಗಳನ್ನೂ ರಚಿಸಿದ್ದಾರೆ. 'ಆದಿಕೇಶವ' ಇವರ ಅಂಕಿತನಾಮವಾಗಿದೆ. ಕಾಗಿನೆಲೆಯ ಆದಿಕೇಶವ ಇವರ ಇಷ್ಟದೈವ. ಇವರು ತಮ್ಮ ಹಾಡುಗಳಲ್ಲಿ ಸಮಾಜದ ಮೂಢನಂಬಿಕೆಗಳನ್ನು ಖಂಡಿಸಿ ಭಗವಂತನನ್ನು ಸೇರುವ ಸರಳ ಮಾರ್ಗವನ್ನು ಬೋಧಿಸಿದ್ದಾರೆ. ಇವರು ತಮ್ಮ ಕೀರ್ತನೆಯಲ್ಲಿ ಜಾತಿಪದ್ಧತಿಯನ್ನು ವಿಡಂಬನೆ ಮಾಡಿದ್ದಾರೆ.

ಕನಕನ ಕಿಂಡಿ: ಉಡುಪಿಯ ದೇವಾಲಯದ ಒಳಗೆ ಕನಕದಾಸರಿಗೆ ಪ್ರವೇಶವನ್ನು ಅಲ್ಲಿನ ಪುರೋಹಿತರು ನಿರಾಕರಿಸುತ್ತಾರೆ. ಆಗ ಕನಕದಾಸರ ಭಕ್ತಿಗೆ ಮೆಚ್ಚಿದ ಶ್ರೀಕೃಷ್ಣನು ಪಶ್ಚಿಮಾಭಿಮುಖನಾಗಿ ತಿರುಗಿ ಕಿಂಡಿಯ ಮೂಲಕ ದರ್ಶನ ಕೊಟ್ಟನೆಂದು ಐತಿಹ್ಯವಿದೆ.

ಕನಕದಾಸರು ಹರಿಭಕ್ತಿಸಾರ, ನಳಚರಿತ್ರೆ, ರಾಮಧಾನ್ಯ ಚರಿತೆ ಎಂಬ ಷಟ್ಪದಿ ಕಾವ್ಯಗಳನ್ನೂ ಮೋಹನ ತರಂಗಿಣಿ ಎಂಬ ಸಾಂಗತ್ಯ ಕೃತಿಯನ್ನೂ ರಚಿಸಿದ್ದಾರೆ.

**ಶಿಶುನಾಳ ಶರೀಫ**



ಶಿಶುನಾಳ ಶರೀಫರು ಕನ್ನಡದ ಮೊದಲ ಮುಸ್ಲಿಂ ಅನುಭಾವಿ ಕವಿ. ಇವರನ್ನು 'ಕರ್ನಾಟಕದ ಕಬೀರ' ಎಂದು ಕರೆಯುತ್ತಾರೆ. ಶಿಶುನಾಳ ಎಂಬ ಗ್ರಾಮದಲ್ಲಿ 1819 ರಲ್ಲಿ ಜನಿಸಿದರು. ಇವರ ತಂದೆ ಇಮಾಮ್ ಸಾಹೇಬ, ತಾಯಿ ಹಜ್ಜಮಾ. ಶರೀಫರು ಬಾಲಕನಿರುವಾಗಲೇ ಹಿಂದೂ-ಮುಸ್ಲಿಂ ಎರಡೂ ಧರ್ಮಗಳ ಬಗ್ಗೆ ಅರಿತುಕೊಂಡಿದ್ದರು. ನಂತರ ಮುಲ್ಕಿ ಪರೀಕ್ಷೆ ಪಾಸು ಮಾಡಿ ಶರೀಫರು ಕೆಲವು ಕಾಲ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದರು. ಗುರು ಗೋವಿಂದ ಭಟ್ಟರಿಂದ ದೀಕ್ಷೆ ತೆಗೆದುಕೊಂಡು ಅನೇಕ ತತ್ವಪದಗಳನ್ನು ರಚಿಸಿದರು. ಇವರ ಪದಗಳಲ್ಲಿ ರಿವಾಯತ್(ಮೊಹರಂ ಪದ) ಇವೆ. ಅವುಗಳಲ್ಲಿ ಕಾಳಗ ಪದ, ಧಾರ್ಮಿಕ ನೀತಿಪದ, ಅಲಾವಿಪದ, ಸವಾಲ್ ಜವಾಬ್ ಪದಗಳು ಇವೆ. ಶಿಶುನಾಳದಲ್ಲಿ ಇವರ ಸಮಾಧಿ ಇದೆ. ಹಿಂದೂ-ಮುಸ್ಲಿಮರಿಬ್ಬರೂ ಇವರನ್ನು ಆರಾಧಿಸುತ್ತಾರೆ. ಜಾತಿ ಮತ್ತು ಧರ್ಮಗಳ ಗಡಿಮೀರಿ ಇವರು ಮಾನವೀಯ ಮೌಲ್ಯಗಳನ್ನು ಬಿತ್ತಿದರು.

## ಉತ್ತರ ಭಾರತದ ಭಕ್ತಿ ಪರಂಪರೆ

**ಕಬೀರದಾಸ್ (ಸಾ. ಶ. 1398-1518)**



ಕಬೀರದಾಸ್

ಭಕ್ತಿಪಂಥದ ಪ್ರಸಿದ್ಧ ಸಂತರಾದ ಕಬೀರ್ ರಾಮಾನಂದರ ಶಿಷ್ಯರು. ಇವರು ಹಿಂದೂ-ಮುಸ್ಲಿಂ ಧರ್ಮಗಳ ನಡುವೆ ಸಾಮರಸ್ಯವನ್ನು ತರಲು ಪ್ರಯತ್ನಿಸಿದರು. ಇವರು ವಾರಣಾಸಿಯಲ್ಲಿನ ನೇಕಾರ ಮುಸ್ಲಿಂ ದಂಪತಿಗಳಾದ ನೀರು ಮತ್ತು ನೀಮರ ಸಾಕು ಮಗ. ಜಾತಿ ಪದ್ಧತಿ, ಆಡಂಬರದ ಜೀವನ, ಜಾತಿ ಶ್ರೇಷ್ಠತೆ, ಧಾರ್ಮಿಕ ಅಸಮಾನತೆ ಇವುಗಳನ್ನು ಖಂಡಿಸಿದರು. ಅಲ್ಲಾ ಮತ್ತು ರಾಮ ಎಂಬುದು ಒಂದೇ ದೇವರ ಎರಡು ಹೆಸರುಗಳು. ಹಿಂದೂ ಮತ್ತು ಮುಸ್ಲಿಮರು ಒಂದು ಮಣ್ಣಿನಿಂದ ತಯಾರಿಸಿದ ಮಡಿಕೆಗಳು ಎಂದು ಬಣ್ಣಿಸಿದರು.

ಕಬೀರರು ತಾನು ರಾಮ ಮತ್ತು ಅಲ್ಲಾಹನ ಮಗನೆಂದು ಸಾರಿದರು. ದೇಹ ದಂಡನೆ, ಉಪವಾಸ, ತೀರ್ಥಯಾತ್ರೆ, ಪವಿತ್ರ ಸ್ನಾನದಿಂದ ದೇವರನ್ನು ಕಾಣಲು ಸಾಧ್ಯವಿಲ್ಲ. ಆದರೆ ಪವಿತ್ರವಾದ ಭಕ್ತಿಮಾರ್ಗದಿಂದ ಮಾತ್ರ ದೇವರನ್ನು ಕಾಣಲು ಸಾಧ್ಯ ಎಂದು ಹೇಳಿದರು. ಕಬೀರರು ತಮ್ಮ ತತ್ವಗಳನ್ನು ಜನರಿಗೆ, ಅರ್ಥವಾಗುವಂತೆ 'ದೋಹ' (ಎರಡು ಸಾಲಿನ ಪದ್ಯ) ಗಳೆಂಬ ಸಣ್ಣ ಕಾವ್ಯಗಳಲ್ಲಿ ಬೋಧಿಸಿದರು. ಇವರ ಅನುಯಾಯಿಗಳನ್ನು ಕಬೀರ್ ಪಂಥಿಗಳೆಂದು ಕರೆಯುತ್ತಾರೆ.

**ಗುರುನಾನಕರು (ಸಾ. ಶ. 1469-1539)**



ಗುರುನಾನಕರು ಸಿಖ್ ಧರ್ಮದ ಸಂಸ್ಥಾಪಕರು. ಇವರು ಈಗಿನ ಪಾಕಿಸ್ತಾನದಲ್ಲಿರುವ ಪಂಜಾಬಿನ ತಳವಂಡಿ ಗ್ರಾಮದಲ್ಲಿ 1469 ರಲ್ಲಿ ಜನಿಸಿದರು. ಮೆಹ್ತಾಕಲು ಮತ್ತು ತೃಪ್ತಾ ಇವರ ತಂದೆ-ತಾಯಿಗಳು. ಅವರು ಹಿಂದೂ- ಮುಸ್ಲಿಂ ಮತಗಳ ಸಮಾನ ಅಂಶಗಳನ್ನು ಒತ್ತಿ ಹೇಳಿದರು. "ಗ್ರಂಥ ಸಾಹಿಬ್" ಎಂಬ ಸಿಖ್ಖರ ಪವಿತ್ರ ಗ್ರಂಥದಲ್ಲಿ ಅವರ ಜಪಜಿಗಳು ಎಂದು ಕರೆಯಲಾಗುವ ಹಾಡುಗಳಿವೆ. ದೇವರ ನಾಮವನ್ನು ಜಪಿಸುವುದು ಮತ್ತು ಒಳ್ಳೆಯ ಕಾರ್ಯಗಳನ್ನು ಮಾಡುವುದಕ್ಕೆ ಸಿಖ್ ಪಂಥ ಮಹತ್ವ ನೀಡಿದೆ. ಸ್ತ್ರೀ-ಪುರುಷರ ಸಮಾನತೆಯನ್ನು ಅದು ಒತ್ತಿ ಹೇಳಿದೆ. ಗುರುನಾನಕರು ದೇವರ ಅಸ್ತಿತ್ವದಲ್ಲಿ ಅಚಲ ನಂಬಿಕೆಯನ್ನು ಹೊಂದಿದ್ದರು. ವಿಶ್ವಕ್ಕೆ ದೇವರು ಒಬ್ಬನೆ, ಅವನು ಸತ್ಯ ನಿತ್ಯನೆಂದು ಸಾರಿದರು. ಜೀವನದಲ್ಲಿ ಮೋಸ, ವಂಚನೆ, ಕಳ್ಳತನ, ಹಿಂಸೆ ಮಾಡಬಾರದು, ಗುರುವಿನಿಂದ ಭಕ್ತಿಯನ್ನು, ಭಕ್ತಿಯಿಂದ ಮುಕ್ತಿಯನ್ನು ಪಡೆಯಬಹುದು ಎಂದು ಹೇಳಿದರು. ಸಾಮಾಜಿಕ ಅನಿಷ್ಟಗಳಾದ ಮೂರ್ತಿಪೂಜೆ, ಜಾತಿಪದ್ಧತಿ, ಸತಿಪದ್ಧತಿ, ಮುಂತಾದವುಗಳನ್ನು ವಿರೋಧಿಸಿದರು. ತಮ್ಮ ದೇಶ ಸಂಚಾರದಲ್ಲಿ ನಾನಕರು ಕರ್ನಾಟಕಕ್ಕೂ ಬಂದಿದ್ದರು. ಅವರು ಬೀದರಿನಲ್ಲಿ ತಂಗಿದ್ದ ಸ್ಥಳವನ್ನು "ನಾನಕ್ ಝುರಾ" (ಸಿಹಿ ನೀರಿನ ಬುಗ್ಗೆ) ಎಂದು ಕರೆಯುತ್ತಾರೆ.

**ತುಳಸೀದಾಸರು (ಸಾ. ಶ. 1532-1623)**



ತುಳಸೀದಾಸರು

ಉತ್ತರ ಭಾರತದ ಭಕ್ತಿ ಮಾರ್ಗದ ಪ್ರತಿಪಾದಕರಲ್ಲಿ ತುಳಸೀದಾಸರು ಅಗ್ರಗಣ್ಯರಾಗಿದ್ದಾರೆ. ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದವರು ಹಿಂದೀ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆ ಅಪಾರವಾಗಿದೆ. ಇವರು "ರಾಮಚರಿತ ಮಾನಸ" ಎಂಬ ಗ್ರಂಥವನ್ನು ಬರೆದರು. ಇದು ಹಿಂದೀ ಸಾಹಿತ್ಯದ ಶ್ರೇಷ್ಠ ಕೃತಿಯಾಗಿದೆ. ಉತ್ತರದಲ್ಲಿ ಇದು 'ತುಳಸೀ ರಾಮಾಯಣ' ಎಂದು ಜನಪ್ರಿಯವಾಗಿದೆ. ರಾಮಭಕ್ತರಾದ ಇವರು ದೈವಭಕ್ತಿ, ಪರಿಶುದ್ಧ ಜೀವನ, ಪ್ರೀತಿ, ಪ್ರೇಮ, ಸಹನೆ, ಔದಾರ್ಯಗಳನ್ನು ಜನಮನದಲ್ಲಿ ಬಿತ್ತಿದರು.

**ಮೀರಾಬಾಯಿ ( ಸಾ. ಶ. 1498-1569)**



ಮೀರಾಬಾಯಿ

“ಕಲಿಯುಗದ ರಾಧ” ಎಂದು ಕರೆಯಲಾಗುವ ಸಂತ ಮೀರಾಬಾಯಿ ಭಾರತದ ಮಹಾನ್ ಕೀರ್ತನಕಾರ್ತಿ ಆಗಿದ್ದರು. ಇವರು ರಾಜಸ್ಥಾನದಲ್ಲಿ ರಜಪೂತ ರಾಜಮನೆತನದಲ್ಲಿ ಜನಿಸಿದರು. ಮೀರಾಬಾಯಿ ಅವರು ರಾಜಾರತನಸಿಂಗನ ಮಗಳು. ಮೇವಾಡದ ರಾಜಕುಮಾರನೊಂದಿಗೆ ಇವರ ವಿವಾಹವಾಯಿತು. ಬಾಲ್ಯದಿಂದಲೂ ಆಧ್ಯಾತ್ಮದ ಕಡೆಗೆ ಒಲವು ಇದ್ದುದರಿಂದ ತನ್ನೆಲ್ಲ ಸಮಯವನ್ನು ಭಗವಂತನ ಪೂಜೆ, ಧ್ಯಾನ ಮತ್ತು ಕೀರ್ತನೆಯಲ್ಲಿ ಕಳೆಯುತ್ತಿದ್ದರು. ಇವರ ಕೃಷ್ಣನ ಆರಾಧನೆಯನ್ನು ಅತ್ತೆ ಕಟುವಾಗಿ ವಿರೋಧಿಸಿದಳು. ಇದನ್ನು ಸಹಿಸಲಾಗದೆ ಮೀರಾಬಾಯಿ ಅರಮನೆ ಬಿಟ್ಟು ಶ್ರೀ ಕೃಷ್ಣನ ಕ್ಷೇತ್ರವಾದ ಬೃಂದಾವನಕ್ಕೆ ಹೋದರು. ಅವರು ರಚಿಸಿದ ಕೀರ್ತನೆಗಳಲ್ಲಿ ಭಕ್ತಿ, ಪ್ರೇಮ ತುಂಬಿ ತುಳುಕಿದೆ. ಗಿರಿಧರ ಗೋಪಾಲ ಇವರ ಆರಾಧ್ಯದೈವ. ತನ್ನ ನೂರಾರು ಭಜನೆಗಳಿಂದ ಮೀರಾಬಾಯಿ ಅವರು ಇಂದಿಗೂ ಜನಮನದಲ್ಲಿ ಶಾಶ್ವತವಾಗಿ ನೆಲೆಸಿದ್ದಾರೆ.

**ಚೈತನ್ಯರು (ಸಾ. ಶ. 1485-1533)**


ಚೈತನ್ಯರು

ಚೈತನ್ಯರು ಪಶ್ಚಿಮ ಬಂಗಾಳದ ನವದ್ವೀಪ (ನಾಡಿಯಾ) ದಲ್ಲಿ ಸಾ. ಶ. 1485 ರಲ್ಲಿ ಜನಿಸಿದರು. ಜಗನ್ನಾಥ ಮಿಶ್ರಾ ಮತ್ತು ಸಚೀದೇವಿ ಇವರ ತಂದೆ-ತಾಯಿಗಳು. ವಿಶ್ವಂಬರ ಎಂಬುದು ಚೈತನ್ಯರ ಮೊದಲ ಹೆಸರು. ಈಶ್ವರಿಪುರಿ ಇವರ ಗುರುಗಳಾಗಿದ್ದರು. ಚೈತನ್ಯರು ತಮ್ಮ 25 ನೇ ವರ್ಷದಲ್ಲಿ ಸಂಸಾರವನ್ನು ತ್ಯಜಿಸಿ ಸನ್ಯಾಸವನ್ನು ಸ್ವೀಕರಿಸಿದರು. ಇವರು ಜಾತಿಭೇದವನ್ನು ಅಲ್ಲಗಳೆದರು. ಮುಕ್ತಿಗೆ ಭಕ್ತಿಯೊಂದೇ ದಾರಿಯೆಂದರು. ವಿಶ್ವಪ್ರೇಮವೇ ದೇವರ ಪ್ರೀತಿಗಳಿಸುವ ಪ್ರಥಮ ಹೆಜ್ಜೆ ಎಂದು ಬೋಧಿಸಿದರು. ಚೈತನ್ಯರು ಭಾರತದ ಎಲ್ಲಾ

ಕಡೆ ತೀರ್ಥಯಾತ್ರೆ ಕೈಗೊಂಡು ಪ್ರೇಮದ ಸಂದೇಶ ಸಾರಿದರು. ಆದ್ದರಿಂದ ಪ್ರೇಮ, ಸಹೋದರಭಾವ ಮತ್ತು ದಾನಶೀಲತೆ ಇವು ಅವರ ಬೋಧನೆಯ ತಿರುಳು ಆಗಿತ್ತು. ಇಂದಿನ ಹರೇಕೃಷ್ಣ ಪಂಥ ಇವರಿಂದ ಪ್ರಭಾವಿತವಾಗಿದೆ. ಚೈತನ್ಯರನ್ನು ಶ್ರೀಕೃಷ್ಣನ ಅವತಾರವೆಂದು ಪರಿಗಣಿಸುವ ಬಂಗಾಳದ ಜನತೆ ಅವರನ್ನು "ಚೈತನ್ಯ ಮಹಾಪ್ರಭು" ಎಂದು ಕರೆದಿದ್ದಾರೆ.

### ಭಕ್ತಿಪಂಥದ ಪರಿಣಾಮಗಳು

1. ಭಕ್ತಿಸಂತರು ಹಿಂದೂ-ಮುಸ್ಲಿಂ ಸಾಮರಸ್ಯ ಸಾಧಿಸುವಲ್ಲಿ ಕಾರಣರಾದರು.
2. ಭಕ್ತಿ ಸಂತರು ಜನರಾಡುವ ಸ್ಥಳೀಯ ಭಾಷೆಯಲ್ಲಿ ಸಾಹಿತ್ಯ ರಚನೆ ಮಾಡಿದರು. ಇದರಿಂದಾಗಿ ಭಾರತೀಯ ದೇಶಿ ಭಾಷೆಗಳು ಶ್ರೀಮಂತಗೊಂಡವು.

## ಸೂಫಿ ಪರಂಪರೆ

ಹಿಂದೂಗಳಲ್ಲಿ ಕಬೀರರು, ಕನಕದಾಸರು, ಚೈತನ್ಯರು ಮುಂತಾದವರು ಧರ್ಮ ಜಾಗೃತಿಯನ್ನು ಉಂಟು ಮಾಡಿದಂತೆ, ಮುಸ್ಲಿಮರಲ್ಲಿ ಸೂಫಿ ಸಂತರು ಧರ್ಮ ಜಾಗೃತಿಯನ್ನು ಉಂಟು ಮಾಡಿದರು. ಹಿಂದೂ-ಮುಸ್ಲಿಮರ ಏಕತೆಗಾಗಿ ಶ್ರಮಿಸಿದರು. ಸೂಫಿ ಪಂಥವು ಅರೇಬಿಯಾದಲ್ಲಿ ಉದಯಿಸಿ ಭಾರತವನ್ನು ಪ್ರವೇಶಿಸಿತು. ಸೂಫಿ ಎಂಬ ಪದವು 'ಸಾಫ್' ಎಂಬ ಪದದಿಂದ ಬಂದಿದೆ. ಸಾಫ್ ಎಂದರೆ ಶುದ್ಧಿ ಅಥವಾ ಶುಚಿ ಎಂದು ಅರ್ಥ ಬರುತ್ತದೆ. ಸೂಫಿ ಸಂತರು ಮುಸ್ಲಿಂ ಅನುಭಾವಿಗಳಾಗಿದ್ದು ಸಾದಾ ಉಣ್ಣೆಯ ಅಂಗಿಯನ್ನು ತೊಡುತ್ತಾರೆ.

## ಸೂಫಿ ಪಂಥದ ಸಾರ

1. ದೇವರು ಒಬ್ಬನೇ, ಆತನು ಸರ್ವಶಕ್ತನಾಗಿದ್ದಾನೆ. ನಾವೆಲ್ಲರೂ ಆತನ ಮಕ್ಕಳು ಎಂದು ಪ್ರತಿಪಾದಿಸಿತು.
2. ಉತ್ತಮ ಕಾಯಕ (ಕೆಲಸ)ಕ್ಕೆ ಮಹತ್ವ ನೀಡಿತು.
3. ಎಲ್ಲಾ ಮಾನವರು ಸಮಾನರು ಎಂದು ಸಾರಿತು.
4. ಜಾತಿಪದ್ಧತಿಯನ್ನು ವಿರೋಧಿಸಿತು.

ಕಾಲಕ್ರಮೇಣ ಯೋಗ, ವೇದಾಂತ ಮತ್ತು ಬೌದ್ಧ ಮತದ ಚಿಂತನೆಗಳಿಂದ ಸೂಫಿಗಳು ಪ್ರಭಾವಿತರಾದರು. ಧರ್ಮವೆಂದರೆ ಪ್ರೇಮ, ಮಾನವನ ಸೇವೆ ಎಂಬುದೇ ಸೂಫಿಗಳ ಮೂಲ ತತ್ವವಾಗಿದೆ.

## ನಿಜಾಮುದ್ದೀನ್ ಔಲಿಯ



ಇವರು ಭಾರತದ ಪ್ರಮುಖ ಸೂಫಿ ಸಂತರು. ಇವರು ದಿಲ್ಲಿಯಲ್ಲಿ ನೆಲೆಸಿ ಬಡತನದ ಜೀವನ ನಡೆಸಿದರು. ಹುಲ್ಲು ಮಾಡಿನ ಮಸೀದಿ ಇವರ ಚಟುವಟಿಕೆಯ ಕೇಂದ್ರವಾಗಿತ್ತು. ದಿಲ್ಲಿಯ ಸುಲ್ತಾನ ದಾನವಾಗಿ ನೀಡಿದ್ದ ಗ್ರಾಮವೊಂದನ್ನು ಇವರು ತಿರಸ್ಕರಿಸಿದರು. ತಮ್ಮನ್ನು ಕಾಣಲು ಬರುತ್ತಿದ್ದ ಭಕ್ತರಿಗೆ ಸದ್ಗುಣ (ಒಳ್ಳೆಯ ಗುಣ) ಕರುಣೆಯ ಸಂದೇಶ ನೀಡುತ್ತಿದ್ದರು.

## ಖ್ವಾಜಾ ಬಂದೇನವಾಜ್

ಬಂದೇನವಾಜ್‌ರು ಪ್ರಸಿದ್ಧ ಚಿಸ್ತಿ ಸೂಫಿ ಸಂತರು. ಇವರು ದೆಹಲಿಯ ನಾಸಿರುದ್ದೀನನ ಶಿಷ್ಯರು. ಬಂದೇನವಾಜ್ ಎಂದರೆ 'ಮೊರೆಹೊಕ್ಕವರನ್ನು ಪೊರೆಯುವವರು' ಎಂದು ಅರ್ಥ. ಇವರಿಗೆ ಗೇಸುದರಾಜ್ ಎಂದು ಇನ್ನೊಂದು ಹೆಸರು. ಗೇಸುದರಾಜ್ ಎಂದರೆ 'ಉದ್ದ ಕೂದಲಿನವನು' ಎಂದರ್ಥ. ಇವರ ಮೂಲ ಹೆಸರು ಸೈಯದ್ ಮಹಮದ್ ಹುಸೈನಿ. ಇವರಿಗೆ ಸಂಸ್ಕೃತ, ಅರಬೀ, ಪಾರಸಿ, ದಖನಿ (ಉರ್ದು) ಹೀಗೆ ಅನೇಕ ಭಾಷೆಗಳು ಬರುತ್ತಿದ್ದವು. ಇವರು ಕಲಬುರಗಿಗೆ ಬಂದು ನೆಲೆಸಿದರು. ದೊರೆ ಫಿರೋಜ್ ಷಾ ಇವರಿಗೆ ತುಂಬಾ ಗೌರವ ನೀಡುತ್ತಿದ್ದನು. ಇವರು ದಖನಿ ಭಾಷೆಯಲ್ಲಿ ಸಾಹಿತ್ಯ ರಚಿಸಿದ್ದಾರೆ. ಈಗಲೂ ಕಲಬುರಗಿಯ ಇವರ ದರ್ಗಾದಲ್ಲಿನ ಸಾಹಿತ್ಯ ಭಂಡಾರದಲ್ಲಿ ನೋಡಬಹುದು. ಕಲಬುರಗಿಯಲ್ಲಿ ಪ್ರತಿವರ್ಷ ಇವರ ಉರುಸು ನಡೆಯುತ್ತದೆ.

## ಚಿಸ್ತಿ ಪಂಥ

ಸೂಫಿ ಪಂಥದಲ್ಲಿ ಚಿಸ್ತಿ ಪಂಗಡ ಪ್ರಮುಖವಾದುದು. ಇದರ ಸ್ಥಾಪಕ ಮುಯಿನಿದ್ದೀನ್ ಚಿಸ್ತಿ. ಇವರು ಅಜ್ಮೀರಕ್ಕೆ ಬಂದು ನೆಲೆಸಿದರು. ದೈವಭಕ್ತಿ, ಗುರುಸೇವೆ, ಸನ್ಮಾರ್ಗದಲ್ಲಿ ನಡೆಯುವುದು ಚಿಸ್ತಿ ಅನುಯಾಯಿಗಳ ಲಕ್ಷಣವಾಗಿತ್ತು. ಚಿಸ್ತಿಗಳಿಗೆ ಹಿಂದೂ-ಮುಸ್ಲಿಂ ಸಾಮರಸ್ಯದ ಬಗ್ಗೆ ಕಾಳಜಿಯಿತ್ತು. ಇವರು ಜನ ಬಳಕೆಯ ದಖನ್ (ಉರ್ದು) ಭಾಷೆಯಲ್ಲಿ ಕೃತಿ ಬರೆದರು. ಫತೇಪುರ ಸಿಕ್ರಿ ಎಂಬಲ್ಲಿನ ಸಲೀಮ್ ಚಿಸ್ತಿ ಪ್ರಸಿದ್ಧರಾಗಿದ್ದರು.



ಲಾಹೋರ (ಈಗಿನ ಪಾಕಿಸ್ತಾನ)- ಶೇಖ್ ಇಸ್ಮಾಯಿಲ್

ಅಜ್ಮೀರ- ಖ್ವಾಜಾ ಮೊಯಿನುದ್ದೀನ್ ಚಿಸ್ತಿ

ದೆಹಲಿ- ನಿಜಾಮುದ್ದೀನ್ ಔಲಿಯಾ

ಅರ್ಕಾಟ್- ಟಿಪ್ಪು ಮಸ್ತಾರ ಔಲಿಯಾ

ಕಲಬುರಗಿ- ಖ್ವಾಜಾ ಬಂದೇನವಾಜ.

**ಕಾಲಗಣನೆ (ಸಾ. ಶ)**

ನಿಜಾಮುದ್ದಿನ್ ಔಲಿಯ- 1238 ರಿಂದ 1325

ಕಬೀರದಾಸರು- 1440 ರಿಂದ 1518

ಗುರುನಾನಕ್- 1469 ರಿಂದ1539

ಪುರಂದರ ದಾಸರು- 1480 ರಿಂದ 1564

ಚೈತನ್ಯರು- 1485 ರಿಂದ 1533

ಮೀರಾಬಾಯಿ- 1498 ರಿಂದ 1569

ಕನಕದಾಸರು- 1508 ರಿಂದ 1606

ತುಳಸೀದಾಸರು- 1532 ರಿಂದ 1623

## ಅಭ್ಯಾಸಗಳು

**. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.**

1. ಅಕ್ಕಮಹಾದೇವಿಯವರ ವಚನದ ಅಂಕಿತನಾಮ ________.
2. ಪುರಂದರದಾಸರು ________ ಆಸ್ಥಾನದಲ್ಲಿ ಇದ್ದರು.
3. ‘ಆದಿಕೇಶವ’ ಎಂಬುದು ________ ಅಂಕಿತನಾಮ.
4. ಕರ್ನಾಟಕದ ಕಬೀರ ಎಂದು ________ ಅವರನ್ನು ಕರೆಯುತ್ತಾರೆ.
5. ಚೈತನ್ಯರ ಮೊದಲ ಹೆಸರು ________
6. ಸೂಫಿ ಸಂತ ಖ್ವಾಜ ಬಂದೇನವಾಜರಿಗಿದ್ದ ಇನ್ನೊಂದು ಹೆಸರು ________

**II. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

1. ಆಂಡಾಳ್‌ರ ಮೂಲ ಹೆಸರೇನು?
2. ಅಕ್ಕಮಹಾದೇವಿ ಎಲ್ಲಿ ಜನಿಸಿದರು?
3. ಕರ್ನಾಟಕ ಸಂಗೀತದ ಪಿತಾಮಹ ಯಾರು?
4. ಕನಕದಾಸರ ತಂದೆ-ತಾಯಿಗಳನ್ನು ಹೆಸರಿಸಿರಿ.
5. ಕನ್ನಡದ ಮೊದಲ ಮುಸ್ಲಿಂ ಕವಿ ಯಾರು?
6. ಸಿಖ್ಖರ ಪವಿತ್ರ ಗ್ರಂಥ ಯಾವುದು?
7. ಕಲಿಯುಗದ ರಾಧಾ ಎಂದು ಯಾರನ್ನು ಕರೆಯುತ್ತಿದ್ದರು?
8. ಸೂಫಿ ಪದದ ಅರ್ಥವೇನು?
9. ಭಾರತದ ಸೂಫಿ ಸಂತರು ಯಾರ್ಯಾರು?
10. ಚಿಸ್ತಿ ಪಂಗಡದ ಸ್ಥಾಪಕ ಯಾರು?

**III. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

1. ಕಬೀರ್ದಾಸರು ನೀಡಿದ ಸಂದೇಶಗಳನ್ನು ತಿಳಿಸಿ.
2. ಗುರುನಾನಕರ ಬೋಧನೆಗಳೇನು?
3. ಭಕ್ತಿ ಪಂಥದ ಪರಿಣಾಮಗಳು ಯಾವುವು?
4. ಸೂಫಿ ಪಂಥದ ಸಾರವನ್ನು ಸಂಗ್ರಹಿಸಿ ಬರೆಯಿರಿ.

**IV. ಈ ಕೆಳಗಿನ ‘ಎ’ ಪಟ್ಟಿಗೆ ಸಂಬಂಧಿಸಿದ ‘ಬಿ’ ಪಟ್ಟಿಯಲ್ಲಿನ ವಿಷಯಗಳನ್ನು ಹೊಂದಿಸಿ ಬರೆಯಿರಿ.**

| ಎ | ಬಿ |
|---|---|

| 1. ಗುರುನಾನಕ್ | a. ಸೂಫಿಸಂತ |
|---|---|
| 2. ಚೈತನ್ಯ | b. ಸಿಖ್‌ಧರ್ಮ |
| 3. ನಿಜಾಮುದ್ದಿನ್ ಔಲಿಯ | c. ಕಲಿಯುಗದ ರಾಧ |
| 4. ಮೀರಾಬಾಯಿ | d. ಹರೇಕೃಷ್ಣ ಪಂಥ |

**ಚರ್ಚಿಸಿ**

1. ಭಕ್ತಿಸಂತರ ಬೋಧನೆಗಳ ಪ್ರಸ್ತುತತೆ ಕುರಿತು ಚರ್ಚಿಸಿ

**ಚಟುವಟಿಕೆಗಳು**

1. ಭಕ್ತಿಸಂತರ ಭಾವಚಿತ್ರಗಳನ್ನು ವಿವರಣೆಯೊಂದಿಗೆ ಸಂಗ್ರಹಿಸಿ.
2. ಶ್ರೀಚೈತನ್ಯ, ಗುರು ನಾನಕ್, ಮೀರಾಬಾಯಿ, ತುಲಸೀದಾಸ್, ಕಬೀರ್, ಸೂರ್ದಾಸ್ ಮತ್ತು ಸೂಫಿಸಂತರ ಜೀವನ ಚರಿತ್ರೆಯನ್ನು ಓದಿ.
3. ಮೀರಾ ಭಜನೆಗಳನ್ನು ಆಲಿಸಿ.
4. ಸೂಫಿ ಪಂಥದ ವಿಚಾರವಾಗಿ ಇನ್ನಷ್ಟು ವಿವರಗಳನ್ನು ಸಂಗ್ರಹಿಸಿ, ಭಾರತದ ಬಹುಧರ್ಮೀಯ ಸಮಾಜದ ಮೇಲೆ ಅವರ ಪ್ರಭಾವ ಹಾಗೂ ಇಂದಿನ ಸನ್ನಿವೇಶದಲ್ಲಿ ಅವರ ಪ್ರಸ್ತುತತೆಯ ವಿಚಾರದ ಕುರಿತು ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ.

## ಪಾಠ-4: ನಾಯಕರು, ಪಾಳೆಯಗಾರರು ಮತ್ತು ನಾಡ ಪ್ರಭುಗಳು

### ಪಾಠದ ಪರಿಚಯ

ವಿಜಯನಗರದ ಪತನದನಂತರ ಕೆಲವೇ ದಶಕಗಳಲ್ಲಿ ಕರ್ನಾಟಕವು ಮುಖ್ಯವಾಗಿ ಮೂರು ಆಡಳಿತ ವ್ಯವಸ್ಥೆಗೆ ಒಳಪಟ್ಟಿತು. ಅವುಗಳೆಂದರೆ ವಿಜಯಪುರ (ಬಿಜಾಪುರ), ಕೆಳದಿ ಮತ್ತು ಮೈಸೂರು. ಬಿಜಾಪುರ ರಾಜ್ಯ ಕೊನೆಗೊಂಡ ಬಳಿಕ ಕರ್ನಾಟಕದ ಬಹುಭಾಗದಲ್ಲಿ ಮೊಗಲ್ ಮತ್ತು ಮರಾಠ ಆಡಳಿತ ನಡೆಯಿತು. ಇವರ ಮೇಲಾಟದ ನಡುವೆಯೂ ತಮ್ಮ ರಾಜ್ಯಗಳನ್ನು ಸ್ವತಂತ್ರವಾಗಿ ಉಳಿಸಿಕೊಂಡ ಕೆಳದಿ ಮತ್ತು ಮೈಸೂರು ರಾಜ್ಯಗಳು ವಿಜಯನಗರದ ಪರಂಪರೆಯನ್ನು ತಮ್ಮ ಪ್ರದೇಶದಲ್ಲಿ ಮುಂದುವರೆಸಿಕೊಂಡು ಬಂದವು. ಇವಲ್ಲದೆ ಚಿತ್ರದುರ್ಗ, ಸುರಪುರ, ಯಲಹಂಕ (ಬೆಂಗಳೂರು) ಮುಂತಾದ ಹಲವು ಪಾಳೆಯಪಟ್ಟುಗಳು ಬೆಳೆದವು.

ಈ ಪಾಠದಲ್ಲಿ ಕೆಳದಿ ನಾಯಕರು, ಚಿತ್ರದುರ್ಗದ ಪಾಳೆಯಗಾರರು, ಸುರಪುರ ನಾಯಕರು ಹಾಗೂ ಯಲಹಂಕ ನಾಡಪ್ರಭುಗಳ ಸಾಧನೆಗಳನ್ನು ನಿರೂಪಿಸಲಾಗಿದೆ.

### ಸಾಮರ್ಥ್ಯಗಳು

1. ಹಿರಿಯ ವೆಂಕಟಪ್ಪ ನಾಯಕ ಮತ್ತು ಶಿವಪ್ಪ ನಾಯಕನ ಸಾಧನೆಗಳನ್ನು ಅರ್ಥೈಸಿಕೊಳ್ಳುವುದು.
2. ರಾಣಿ ಚನ್ನಮ್ಮಾಜಿಯ ವೀರಗಾಥೆಯನ್ನು ಅರಿತುಕೊಳ್ಳುವುದು.
3. ಕೆಳದಿಯ ನಾಯಕರ ಪರಧರ್ಮ ಸಹಿಷ್ಣುತೆಯನ್ನು ಗುರುತಿಸುವುದು.
4. ಚಿತ್ರದುರ್ಗದ ರಾಜವೀರ ಮದಕರಿ ನಾಯಕನ ಶೌರ್ಯ ಮತ್ತು ಸಾಧನೆಗಳನ್ನು ಮೆಚ್ಚುವುದು.
5. ಸುರಪುರದ ನಾಲ್ವಡಿ ವೆಂಕಟಪ್ಪ ನಾಯಕನ ಸಾಧನೆಗಳನ್ನು ಅರ್ಥೈಸಿಕೊಳ್ಳುವುದು.
6. ಸುರಪುರ ನಾಯಕರು ಸಾಂಸ್ಕೃತಿಕ ಕ್ಷೇತ್ರಕ್ಕೆ ನೀಡಿದ ಕೊಡುಗೆಗಳನ್ನು ಪ್ರಶಂಸಿಸುವುದು.
7. ಯಲಹಂಕ ನಾಡಪ್ರಭುಗಳಾದ ಒಂದನೆಯ ಕೆಂಪೇಗೌಡ ಮತ್ತು ಎರಡನೆಯ ಕೆಂಪೇಗೌಡ ಮತ್ತು ಇತರರ ಸಾಧನೆಗಳನ್ನು ತಿಳಿದುಕೊಳ್ಳುವುದು.

### ಕೆಳದಿಯ ನಾಯಕರು (ಸಾ. ಶ. 1499-1763)

ನಾಯಕರು: ವಿಜಯನಗರ ಸಾಮ್ರಾಜ್ಯದ ಅಧೀನದಲ್ಲಿ ಅನೇಕ ಚಿಕ್ಕಪುಟ್ಟ ಅರಸರಿದ್ದರು. ಇವರೇ ನಾಯಕರು ಅಥವಾ ಪಾಳೆಯಗಾರರು. ಪಾಳೆಯಗಾರರ ವಶವಿದ್ದ ಸೀಮೆಯನ್ನು 'ಪಾಳೆಯಪಟ್ಟು' ಎನ್ನುತ್ತಿದ್ದರು. ನಾಯಕರಲ್ಲಿ ಕೆಳದಿ ಮತ್ತು ಚಿತ್ರದುರ್ಗದ ನಾಯಕರು ಪ್ರಸಿದ್ಧರು.

ವಿಜಯನಗರ ಕಾಲದಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿ ಕೆಳದಿ ರಾಜ್ಯವು ಸಾ. ಶ. 1499 ರಲ್ಲಿ ಸ್ಥಾಪನೆಗೊಂಡು ಮುಂದೆ ಅದು ಸ್ವತಂತ್ರಗೊಂಡಿತು. ಕೆಳದಿಯ ನಾಯಕರು ಕರ್ನಾಟಕದ ಕರಾವಳಿ ಮತ್ತು ಮಲೆನಾಡು ಪ್ರದೇಶಗಳನ್ನು ಆಳುತ್ತಿದ್ದರು.

ಕೆಳದಿ ಸಂಸ್ಥಾನವು ವಿಶಾಲ ಹಾಗೂ ಸಂಪದ್ಭರಿತವಾಗಿತ್ತು. ಶಿವಮೊಗ್ಗ, ದಕ್ಷಿಣ ಕನ್ನಡ, ಉಡುಪಿ, ಕಾಸರಗೋಡು (ಕೇರಳ), ಕೊಡಗು, ಹಾಸನ, ತುಮಕೂರು, ಚಿತ್ರದುರ್ಗ, ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಭಾಗಗಳನ್ನು ಕೆಳದಿ ರಾಜ್ಯ ಒಳಗೊಂಡಿತ್ತು.

ಹಿರಿಯ ವೆಂಕಟಪ್ಪ ನಾಯಕ (ಸಾ. ಶ. 1582-1629): ವೆಂಕಟಪ್ಪ ನಾಯಕನು ಕೆಳದಿ ಅರಸರಲ್ಲೇ ಅತ್ಯಂತ ಪ್ರಖ್ಯಾತನಾಗಿದ್ದನು. ಇವನ ಕಾಲದಲ್ಲಿ ಕೆಳದಿ ರಾಜ್ಯವು ಪೂರ್ಣ ಸ್ವತಂತ್ರವಾಯಿತು. ಈತನು ಕರಾವಳಿಯಲ್ಲಿ ಚಂದ್ರಗಿರಿ ನದಿಯವರೆಗೆ ವಿಜಯಯಾತ್ರೆ ಮಾಡಿದನು. ಉಳ್ಳಾಲದ ರಾಣಿ ಅಬ್ಬಕ್ಕಳ ನೆರವಿನಿಂದ ಪೋರ್ಚುಗೀಸರನ್ನು ಮಂಗಳೂರಿನಲ್ಲಿ ಈತನು ಸೋಲಿಸಿದನು. ವಿಜಯಪುರದ ಆದಿಲ್ ಷಾಹಿ ಸೇನೆಯನ್ನು ಸೋಲಿಸಿ ಹಾನಗಲ್‌ನಲ್ಲಿ ವಿಜಯಸ್ತಂಭ ಸ್ಥಾಪಿಸಿದನು. ಎಲ್ಲಾ ಧರ್ಮಗಳಿಗೂ ಈತನು ಪ್ರೋತ್ಸಾಹ ನೀಡಿದನು.

### ಶಿವಪ್ಪ ನಾಯಕ (ಸಾ. ಶ. 1645-1660)

ಶಿವಪ್ಪ ನಾಯಕ ಕೆಳದಿಯ ಪ್ರಸಿದ್ಧ ಅರಸನಾಗಿದ್ದನು. ಇವನು ಕರಾವಳಿಯ ಪೋರ್ಚುಗೀಸರ ಕೋಟೆಗಳನ್ನು ವಶಪಡಿಸಿಕೊಂಡು 'ಪಡುಗಡಲೊಡೆಯ' ಎನಿಸಿದನು. ರಾಜ್ಯದ ರಕ್ಷಣೆಗಾಗಿ ಬೇಕಲ್ ಮತ್ತು ಚಂದ್ರಗಿರಿ (ಕೇರಳ) ಹಾಗೂ ಮಂಗಳೂರು ಮುಂತಾದೆಡೆಗಳಲ್ಲಿ ಭದ್ರವಾದ ಕೋಟೆಗಳನ್ನು ಕಟ್ಟಿಸಿದನು. ಶಿವಪ್ಪ ನಾಯಕನು ಧರ್ಮ ಶ್ರದ್ಧೆಯುಳ್ಳವನಾಗಿದ್ದನು.

ವ್ಯಾಪಾರದ ಅಭಿವೃದ್ಧಿಗಾಗಿ ಗೋವೆಯ ವ್ಯಾಪಾರಿ ವರ್ಗದವರಿಗೆ ತನ್ನ ರಾಜ್ಯದಲ್ಲಿ ಬಂದು ನೆಲೆಸಲು ಪ್ರೋತ್ಸಾಹ ನೀಡಿದನು. ಗೋವೆಯ ಕ್ರೈಸ್ತರು ಕೃಷಿಯಲ್ಲಿ ನಿಪುಣರಾದುದರಿಂದ ಅವರಿಗೂ ತನ್ನ ರಾಜ್ಯಕ್ಕೆ ವಲಸೆ ಬರಲು ಪ್ರೋತ್ಸಾಹಿಸಿ, ಭೂಮಿ ಹಾಗೂ ಇನ್ನಿತರ ಕಾಣಿಕೆಗಳನ್ನು ಕೊಟ್ಟನು. ಅವನು ತನ್ನ ರಾಜ್ಯದಲ್ಲಿ ಪಾದ್ರಿಗಳು ಮಾತ್ರ ಸ್ಥಳೀಯರೇ ಇರಬೇಕೆಂದು ಕಟ್ಟಳೆ ಮಾಡಿದ್ದನು.

ಶಿವಪ್ಪ ನಾಯಕನ ಸಿಸ್ತು: ಶಿವಪ್ಪ ನಾಯಕನು ಆಳವಡಿಸಿದ ಕಂದಾಯ ವ್ಯವಸ್ಥೆಯನ್ನು 'ಸಿಸ್ತು' ಎಂದು ಕರೆಯಲಾಗಿದೆ. ಈ ಪದ್ಧತಿಯಂತೆ ಭೂಕಂದಾಯವನ್ನು ನಿಗದಿಪಡಿಸಲು ಭೂಮಿಯನ್ನು ಫಲವತ್ತತೆಯ ಆಧಾರದ ಮೇಲೆ ವರ್ಗೀಕರಿಸಲಾಗುತ್ತಿತ್ತು. ಬೆಳೆಯ 1/3 ಭಾಗವನ್ನು ಕಂದಾಯ ರೂಪದಲ್ಲಿ ಸಂಗ್ರಹಿಸಲಾಗುತ್ತಿತ್ತು. ಇಂಥ ಕ್ರಮಬದ್ಧ ಕಂದಾಯ

ಪದ್ಧತಿಯನ್ನು 'ಶಿವಪ್ಪ ನಾಯಕನ ಸಿಸ್ತು' ಎನ್ನುವರು. ಸಿಸ್ತು ಮಲೆನಾಡಿನ ಸಮೃದ್ಧಿಗೆ ಕಾರಣವಾಯಿತು.

ರಾಣಿ ಚನ್ನಮ್ಮಾಜಿ (1671-1696): ಶಿವಪ್ಪ ನಾಯಕನ ಅನಂತರ ಅವನ ಸೊಸೆ ರಾಣಿ ಚನ್ನಮ್ಮಾಜಿ ರಾಜ್ಯವಾಳಿದಳು. ಈಕೆಯು ಮೊಗಲರ ಸೈನ್ಯವನ್ನು ಹಿಮ್ಮೆಟ್ಟಿಸಿ ಶಿವಾಜಿಯ ಮಗ ಛತ್ರಪತಿ ರಾಜರಾಮನಿಗೆ ರಕ್ಷಣೆ ನೀಡಿದಳು. ಕನ್ನಡ ನಾಡಿನ ಶೌರ್ಯ, ತ್ಯಾಗಕ್ಕೆ ಸಂಕೇತವಾಗಿದ್ದ ಚನ್ನಮ್ಮ ಮೈಸೂರಿನ ಸೈನ್ಯದೊಂದಿಗೂ ಸೆಣಸಾಡಿದಳು.

ಕೆಳದಿ ಅರಸರು ದೇವಸ್ಥಾನಗಳು, ಅಗ್ರಹಾರಗಳು ಮತ್ತು ವೀರಶೈವ ಮಠಗಳನ್ನು ಸ್ಥಾಪಿಸಿದರು. ಇಕ್ಕೇರಿಯ ಅಘೋರೇಶ್ವರ ದೇವಾಲಯ ಶಿಲ್ಪಕಲೆಗೆ ಪ್ರಸಿದ್ಧವಾಗಿದೆ. ಮಠಗಳು ದಾಸೋಹ ಹಾಗೂ ಶಿಕ್ಷಣದ ಕೇಂದ್ರಗಳಾಗಿದ್ದವು. ಸಕಲ ಧರ್ಮಗಳಿಗೆ ಅಪಾರ ದತ್ತಿದಾನ ನೀಡಿದರು. ಚನ್ನಮ್ಮಾಜಿಯು ಮಂಗಳೂರಿನಲ್ಲಿ ಕ್ರೈಸ್ತ ದೇವಾಲಯವೊಂದಕ್ಕೆ ನಿವೇಶನವಿತ್ತಳು. ಮೈಸೂರಿನ ಜೊತೆ ಸತತ ಸ್ಪರ್ಧೆ ಹಾಗೂ ಆಂತರಿಕ ಯುದ್ಧಗಳಿಂದಾಗಿ ಕೆಳದಿ ರಾಜ್ಯ ದುರ್ಬಲವಾಯಿತು. ಮುಂದೆ ಹೈದರಾಲಿಯು ಕೆಳದಿ ಸಂಸ್ಥಾನವನ್ನು ವಶಪಡಿಸಿಕೊಂಡನು.

**ಕಾಲಗಣನೆ (ಸಾ. ಶ.)**

ಕೆಳದಿ ರಾಜ್ಯದ ಆಳ್ವಿಕೆಯ ಕಾಲ- 1499-1763
ಹಿರಿಯ ವೆಂಕಟಪ್ಪ ನಾಯಕ- 1586-1629
ಶಿವಪ್ಪ ನಾಯಕ- 1645-1660
ರಾಣಿ ಚನ್ನಮ್ಮಾಜಿ- 1671-1696
ಹೈದರ್ ಅಲಿ ಕೆಳದಿಯನ್ನು ಪರಾಭವಗೊಳಿಸಿದ್ದು- 1763

## ಅಭ್ಯಾಸಗಳು

### I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.

1. ಪೋರ್ಚುಗೀಸರನ್ನು ಸೋಲಿಸಲು ಹಿರಿಯ ವೆಂಕಟಪ್ಪ ನಾಯಕನಿಗೆ ನೆರವಾದ ಉಳ್ಳಾಲದ ರಾಣಿ ________.
2. ರಾಣಿ ಚನ್ನಮ್ಮಾಜಿಯು ಮೊಗಲರನ್ನು ಹಿಮ್ಮೆಟ್ಟಿಸಿ ________ ಗೆ ರಕ್ಷಣೆ ನೀಡಿದಳು.

### II. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

1. ಕೆಳದಿಯ ಇತಿಹಾಸದಲ್ಲಿ ಪಡುಗಡಲೊಡೆಯ ಎಂಬುದಾಗಿ ಯಾರನ್ನು ಕರೆಯಲಾಗುತ್ತದೆ?
2. ಗೋವೆಯ ಕ್ರೈಸ್ತರನ್ನು ಶಿವಪ್ಪ ನಾಯಕನು ಹೇಗೆ ಪ್ರೋತ್ಸಾಹಿಸಿದನು?
3. 'ಸಿಸ್ತು' ಎಂದರೇನು?

4. ರಾಣಿ ಚನ್ನಮ್ಮಾಜಿ ಯಾರು?

**III.ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

1. ಹಿರಿಯ ವೆಂಕಟಪ್ಪ ನಾಯಕನ ಸಾಧನೆಗಳು ಯಾವುವು?
2. ಕೆಳದಿಯ ನಾಯಕರು ಮಾಡಿರುವ ಮುಖ್ಯ ಸಾಧನೆಗಳನ್ನು ಕುರಿತು ಬರೆಯಿರಿ.

## ಚಿತ್ರದುರ್ಗದ ನಾಯಕರು

ಚಿತ್ರದುರ್ಗದ ನಾಯಕರಿಗೆ ಕರ್ನಾಟಕದ ಇತಿಹಾಸದಲ್ಲಿ ಗಣ್ಯ ಸ್ಥಾನವಿದೆ. ಇವರು 16 ರಿಂದ 18 ನೇ ಶತಮಾನಗಳವರೆಗೆ ಪಾಳೆಯಗಾರರಾಗಿ ಆಳ್ವಿಕೆ ನಡೆಸಿದರು.

13 ಜನ ನಾಯಕರು 211 ವರ್ಷಗಳ ಕಾಲ ಈ ಸಂಸ್ಥಾನವನ್ನು ಆಳಿದರು. ಮತ್ತಿ ತಿಮ್ಮಣ್ಣನಾಯಕ (ಸಾ. ಶ. 1568-1589) ಈ ಸಂಸ್ಥಾನದ ಮೊದಲ ಅರಸ. ಒಂದನೇ ಕಸ್ತೂರಿ ರಂಗಪ್ಪ ನಾಯಕ (ಸಾ. ಶ. 1603-1652), ಕಸ್ತೂರಿ ಚಿಕ್ಕಣ್ಣ ನಾಯಕ (ಸಾ. ಶ. 1675-1686), ಬಿಚ್ಚುಗತ್ತಿ ಭರಮಣ್ಣ ನಾಯಕ (ಸಾ. ಶ. 1689-1721), ಹಿರೇಮದಕರಿ ನಾಯಕ (ಸಾ. ಶ. 1721-1749) ಮೊದಲಾದವರು ಪ್ರಸಿದ್ಧ ರಾಜರಾಗಿದ್ದರು.

## ರಾಜಾವೀರ ಮದಕರಿ ನಾಯಕ (ಸಾ. ಶ. 1754-1779):

ಈತನು ಚಿತ್ರದುರ್ಗದ ನಾಯಕರಲ್ಲಿ ಅತ್ಯಂತ ಪ್ರಬಲ ಹಾಗೂ ಪ್ರಸಿದ್ಧನಾದವನು. ಕೇವಲ ಹನ್ನೆರಡು ವರ್ಷದವನಾಗಿದ್ದಾಗಲೇ ಸಿಂಹಾಸನವನ್ನೇರಿದನು. ಮದಕರಿಯು ಹೈದರಾಲಿಗೆ ಹಲವಾರು ಯುದ್ಧಗಳಲ್ಲಿ ಸಹಾಯ ಮಾಡಿದನು. ಆದರೆ ಮದಕರಿಯ ಸಾಹಸವನ್ನು ಮನಗಂಡ ಹೈದರಾಲಿ ಒಳಗೊಳಗೆ ಮತ್ಸರಪಟ್ಟನು. ಈತನನ್ನು ಹತ್ತಿಕ್ಕಲು ಚಿತ್ರದುರ್ಗದ ಏಳು ಸುತ್ತಿನ ಕೋಟೆಗೆ ಮುತ್ತಿಗೆ ಹಾಕಿದನು. ಆದರೆ ಅಭೇದ್ಯವಾದ ಕೋಟೆಯನ್ನು ವಶಪಡಿಸಿಕೊಳ್ಳುವುದು ಅಸಾಧ್ಯದ ಮಾತಾಗಿತ್ತು. ಆದುದರಿಂದ ಆತನ ಸೈನಿಕರು ಕೋಟೆಯ ರಹಸ್ಯದಾರಿಯನ್ನು ಪತ್ತೆಮಾಡಿ, ಕಾವಲುಗಾರನಿಲ್ಲದ ವೇಳೆ ಕಳ್ಳಗಿಂಡಿಯಿಂದ ಕೋಟೆ ಪ್ರವೇಶಿಸಲು ಯತ್ನಿಸಿದರು. ಆ ವೇಳೆಗೆ ಕಾವಲುಗಾರನ ಹೆಂಡತಿ ಓಬವ್ವ ತನ್ನ ಒನಕೆಯಿಂದ ಅನೇಕ ಶತ್ರುಗಳನ್ನು ಕೊಂದು ಹಾಕಿದಳು. ಇಂದಿಗೂ ಚಿತ್ರದುರ್ಗದ ಕೋಟೆಯ ಪಶ್ಚಿಮದಲ್ಲಿ ವೀರವನಿತೆ 'ಓಬವ್ವನ ಕಿಂಡಿ' ಇದೆ.

ಸೋಲನ್ನೊಪ್ಪದ ಹೈದರಾಲಿಯು ಚಿತ್ರದುರ್ಗಕ್ಕೆ ಮತ್ತೊಮ್ಮೆ ಮುತ್ತಿಗೆ ಹಾಕಿದನು. ಭೀಕರ ಯುದ್ಧವೊಂದು ನಡೆದು ಮದಕರಿಗೆ ಸೋಲಾಯಿತು. ಮದಕರಿಯ ಆಳ್ವಿಕೆಯ ನಂತರ ಚಿತ್ರದುರ್ಗದ ನಾಯಕರ ವಂಶ ಅಳಿಯಿತು. ಚಿತ್ರದುರ್ಗವು ಒಂದು ಆಕರ್ಷಕವಾದ ಗಿರಿದುರ್ಗವಾಗಿದ್ದು ಏಳು ಸುತ್ತಿನ ಕೋಟೆಯನ್ನು ಹೊಂದಿದೆ. ಇದರ ಒಳಗಿನ ನಿವೇಶನದಲ್ಲಿ ಹಲವು ದೇವಾಲಯಗಳೂ ಕೆರೆಗಳೂ ಇವೆ.

ಚಿತ್ರದುರ್ಗದ ನಾಯಕರು ಹಲವಾರು ದೇವಾಲಯಗಳನ್ನು ಕಟ್ಟಿಸಿದರು. ಭರಮಸಾಗರ ಮತ್ತು ಭೀಮಸಮುದ್ರ ಜಲಾಶಯಗಳು ಇವರ ಕೊಡುಗೆಗಳಾಗಿವೆ. ತಮ್ಮ ಶೌರ್ಯ, ಸಾಹಸಗಳಿಗೆ ಚಿತ್ರದುರ್ಗದ ನಾಯಕರು ಖ್ಯಾತರಾಗಿದ್ದಾರೆ.

**ಕಾಲಗಣನೆ (ಸಾ.ಶ.)**

ಮತ್ತಿ ತಿಮ್ಮಣ್ಣ ನಾಯಕ- 1568-1589
ಬಿಚ್ಚುಗತ್ತಿ ಭರಮಣ್ಣ ನಾಯಕ- 1689-1721
ಹಿರೇಮದಕರಿ ನಾಯಕ- 1721-1749
ರಾಜಾವೀರ ಮದಕರಿ ನಾಯಕ- 1754-1779

## ಅಭ್ಯಾಸಗಳು

### I. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

1. ಮತ್ತಿ ತಿಮ್ಮಣ್ಣನಾಯಕ ಯಾರು?
2. ರಾಜವೀರ ಮದಕರಿನಾಯಕನನ್ನು ಕುರಿತು ಟಿಪ್ಪಣಿ ಬರೆಯಿರಿ.
3. ಒನಕೆ ಓಬವ್ವಳನ್ನು ನಾವು ಇಂದಿಗೂ ಏಕೆ ನೆನೆಯುತ್ತೇವೆ?
4. ಚಿತ್ರದುರ್ಗ ನಾಯಕರು ಕಟ್ಟಿಸಿದ ಕೆರೆಗಳನ್ನು ಹೆಸರಿಸಿ.

## ಸುರಪುರ ನಾಯಕರು

ಯಾದಗಿರಿ ಜಿಲ್ಲೆಯ ಸುರಪುರವು ಕೃಷ್ಣಾ ಹಾಗೂ ಭೀಮಾ ನದಿಗಳ ಮಧ್ಯದಲ್ಲಿದೆ. ಸಾ. ಶ 1636 ರಿಂದ 1858 ರ ವರೆಗೆ ಹನ್ನೆರಡು ಜನ ನಾಯಕ ಅರಸರು ಆಳ್ವಿಕೆ ಮಾಡಿದ್ದಾರೆ. ಗಡ್ಡಿಪಿಡ್ಡನಾಯಕನು ಈ ಮನೆತನದ ಸ್ಥಾಪಕ. ಇವರ ಪೂರ್ವಜರು ವಿಜಯನಗರದ ಸೈನ್ಯದಲ್ಲಿದ್ದವರು. ವಿಜಯನಗರದ ಅವನತಿಯಾದ ಮೇಲೆ ಬೇರೆ ಬೇರೆ ಕಡೆ ಚದುರಿದ ಗುಂಪುಗಳಲ್ಲಿ ಇವರೂ ಒಬ್ಬರು. ಅನಂತರ ಬಿಜಾಪುರದ ಆದಿಲ್ ಷಾಹಿಗಳಿಂದ ಸರದೇಶಗತಿಯನ್ನು ಪಡೆದು ವಾಗಿನಗೇರಿಯಲ್ಲಿ ಆಡಳಿತ ಪ್ರಾರಂಭಿಸಿದರು. ಪೀತಾಂಬರಿ ಬಹರಿಪಿಡ್ಡನಾಯಕ (ಸಾ. ಶ. 1687-1726)ನು ಸಾ. ಶ. 1707 ರಲ್ಲಿ ಸುರಪುರವನ್ನು ನಿರ್ಮಿಸುವ ಮೂಲಕ ಇದನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು.

ನಂತರ ಬ್ರಿಟಿಷರು ಮತ್ತು ಹೈದರಾಬಾದ್‌ನ ನಿಜಾಮನ ಒಪ್ಪಂದದಂತೆ ಈ ಸಂಸ್ಥಾನವು ಅವರ ಅಧೀನಕ್ಕೆ ಬಂದಿತು. ರಾಜಾ ಕೃಷ್ಣಪ್ಪ ನಾಯಕನ ನಂತರ ಆತನ ಮಗನಾದ ರಾಜಾ ನಾಲ್ವಡಿ ವೆಂಕಟಪ್ಪ ನಾಯಕನು (ಸಾ. ಶ. 1843-1858) ಅಧಿಕಾರಕ್ಕೆ ಬಂದನು. ಅದೇ ವೇಳೆಯಲ್ಲಿ ಉತ್ತರ ಭಾರತದಲ್ಲಿ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ (ಸಾ. ಶ 1857) ದ ಕಾವು ಸುರಪುರವನ್ನು ತಟ್ಟಿತು. ನಾಲ್ವಡಿ ವೆಂಕಟಪ್ಪ ನಾಯಕನು ದಕ್ಷಿಣ ಭಾರತದ ರಾಜರನ್ನೆಲ್ಲಾ ಒಂದುಗೂಡಿಸಿ ಬ್ರಿಟಿಷರ ವಿರುದ್ಧ ಸಮರ ಸಾರಲು ಹವಣಿಕೆಯಲ್ಲಿದ್ದನು. ಅರಬ್, ರೋಹಿಲ್ಲರನ್ನು ಸೈನ್ಯದಲ್ಲಿ ಸೇರಿಸಿಕೊಂಡನು ಅಲ್ಲದೇ ಸೈನ್ಯವನ್ನು ತರಬೇತಿಗೊಳಿಸಲು ಪ್ರಾರಂಭಿಸಿದನು. ಇದೆಲ್ಲದರ ಮಾಹಿತಿಯನ್ನು ಪಡೆದ ಬ್ರಿಟಿಷ್ ಅಧಿಕಾರಿ ಥಾರ್ನ್‌ಹಿಲ್‌ನು 24ನೆಯ ಡಿಸೆಂಬರ್ 1857ರಂದು ಕ್ಯಾಪ್ಟನ್ ಕ್ಯಾಂಬಲ್‌ನಿಗೆ ಪತ್ರ ಬರೆದು ಕ್ಷಿಪ್ರ ಕಾರ್ಯಾಚರಣೆಯನ್ನು ಕೈಗೊಳ್ಳಲು ಆದೇಶಿಸಿದನು.

ಬ್ರಿಟಿಷರ ಬಣವು 1858 ರಲ್ಲಿ ಸುರಪುರದ ಮೇಲೆ ನುಗ್ಗಿತು. ಎರಡೂ ಬಣಗಳ ನಡುವೆ ಗುಂಡಿನ ಚಕಮಕಿ ನಡೆಯಿತು. ರೊಚ್ಚಿಗೆದ್ದ ಸುರಪುರ ಸೈನ್ಯವು ಸ್ಟೂಆರ್ಟ್‌ನ ಮೂಳೆ ಮುರಿಯಿತು. ನೂಬೆರಿ ನೆಲಕ್ಕುರುಳಿದ. ಇತ್ತ, ನಾಲ್ವಡಿ ವೆಂಕಟಪ್ಪ ನಾಯಕ ವಿಶೇಷ ಅರಬ್, ರೋಹಿಲ್‌ರ ಸೈನ್ಯವನ್ನು ತರಲು ಹೈದರಾಬಾದ್‌ಗೆ ಪ್ರಯಾಣ ಬೆಳೆಸಿದನು. ಅತ್ತ, ಬ್ರಿಟಿಷ್ ಪಡೆಯು ಸುರಪುರದೊಳಗೆ ನುಗ್ಗಿತು. ಸುರಪುರವು ಪತನವಾಯಿತು. ಹೈದರಾಬಾದ್‌ನಲ್ಲಿ ಸುತ್ತಾಡುತ್ತಿದ್ದ ನಾಲ್ವಡಿ ವೆಂಕಟಪ್ಪ ನಾಯಕನನ್ನು ನೋಡಿದ ವನಪರ್ತಿ ರಾಜನಿಂದ ಸುದ್ದಿಯನ್ನು ತಿಳಿದ ಹೈದರಾಬಾದ್ ನಿಜಾಮನ ಪ್ರಧಾನಮಂತ್ರಿ ಸಾಲಾರಜಂಗನು, ಬ್ರಿಟಿಷರಿಂದ ತನಗೇನಾದರು ಲಾಭ ಸಿಗಬಹುದೆಂದು ತಿಳಿದು ಆತನನ್ನು ಬ್ರಿಟಿಷರಿಗೆ ಒಪ್ಪಿಸಿದನು. ಬ್ರಿಟಿಷರು ನಾಲ್ವಡಿ ವೆಂಕಟಪ್ಪ ನಾಯಕನನ್ನು ಸಿಕಂದರಾಬಾದ್‌ನಲ್ಲಿ ಬಂಧಿಸಿಟ್ಟರು. ನಂತರ ವಿಚಾರಣೆಗೊಳಪಡಿಸಿದರು. ಮರಣ ದಂಡನೆಯ ಶಿಕ್ಷೆಯನ್ನು ವಿಧಿಸಿದಂತೆ ನಾಟಕವಾಡಿದರು.

ಬ್ರಿಟಿಷ್ ಮೆಡೋಸ್ ಟೇಲರ್‌ನ ಕೋರಿಕೆಯಂತೆ ಉನ್ನತ ಅಧಿಕಾರ ಹೊಂದಿದ ಗೌರ್ನರ್ ಜನರಲ್ ರಾಜನ ಮರಣ ದಂಡನೆಯನ್ನು ಕೈಬಿಟ್ಟು 4 ವರ್ಷ ಗಡಿಪಾರು ಶಿಕ್ಷೆಯನ್ನು ವಿಧಿಸಿದರು. ರಾಜನನ್ನು ಮದ್ರಾಸ್ ಸಮೀಪ ಚಂಗಲ್‌ಪೇಟೆ ದುರ್ಗದಲ್ಲಿಡಲು ಹೋಗುತ್ತಿದ್ದಾಗ ದಾರಿಯಲ್ಲಿ ವಿಶ್ರಾಂತಿಗೆಂದು ತಂಗಿದ್ದಾಗ ನಾಲ್ವಡಿ ವೆಂಕಟಪ್ಪ ನಾಯಕನನ್ನು ಬ್ರಿಟಿಷರು ಮೋಸದಿಂದ ಗುಂಡಿಟ್ಟು ಕೊಂದರು. ಆತ್ಮಹತ್ಯೆಮಾಡಿಕೊಂಡನೆಂದು ಸುಳ್ಳು ಸುದ್ದಿ ಹಬ್ಬಿಸಿದರು.

ನಂತರ ಸುರಪುರವನ್ನು ಬ್ರಿಟಿಷರು ಹೈದರಾಬಾದ್ ನಿಜಾಮನಿಗೆ ಕಾಣಿಕೆಯಾಗಿ ನೀಡಿದರು. ಮುಂದಿನ ಸಂಸ್ಥಾನಿಕರು ನಿಜಾಮನ ಅಧೀನದಲ್ಲಿಯೇ ಕಾಲಕಳೆದರು. ಕೊನೆಗೆ 1948 ಸೆಪ್ಟೆಂಬರ್ 17 ರಂದು ಹೈದರಾಬಾದ್ ನಿಜಾಮ ಸಂಸ್ಥಾನವು ಭಾರತದ ಒಕ್ಕೂಟವನ್ನು ಸೇರಿದ ಮೇಲೆ ಸುರಪುರವೂ ಭಾರತದ ಒಕ್ಕೂಟವನ್ನು ಸೇರಿತು.

ಸುರಪುರ ನಾಯಕರ ರಾಜಕೀಯ ಚರಿತ್ರೆಯಂತೆಯೇ ಅವರ ಸಾಂಸ್ಕೃತಿಕ ಕ್ಷೇತ್ರಕ್ಕೂ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಇವರು ಅನೇಕ ಜನಪರ ಕಾರ್ಯಗಳನ್ನು ಕೈಗೊಂಡು ಇಂದಿಗೂ ಜನಮಾನಸದಲ್ಲಿದ್ದಾರೆ. ಕೆರೆ, ಬಾವಿ, ದೇವಾಲಯ, ಅರಮನೆ, ಕೋಟೆ-ಕೊತ್ತಲುಗಳನ್ನು ಕಟ್ಟಿಸಿದ್ದಾರೆ. ಅನೇಕರಿಗೆ ಜಹಗೀರುಗಳನ್ನು ನೀಡಿದ್ದಾರೆ. ಅಲ್ಲದೆ ಇವರ ಕುಲದೇವರಾದ ತಿರುಪತಿ ವೆಂಕಟರಮಣ ಮತ್ತು ಗೋಪಾಲಸ್ವಾಮಿಯ ನಿತ್ಯ ಪೂಜೆಗಾಗಿ ಹಾಗೂ ಉತ್ಸವಗಳಿಗಾಗಿ ಜಹಗೀರು, ಇನಾಮು ಭೂಮಿಯನ್ನು ನೀಡಿದ್ದಾರೆ. ಇವರ ಆಸ್ಥಾನದಲ್ಲಿ ಅನೇಕ ಕಲಾಕಾರರು, ಗಾಯಕರು, ಚಿತ್ರಕಾರರು, ಶಿಲ್ಪಿಗಳು, ಸಾಹಿತಿಗಳು ಆಶ್ರಯಿತರಾಗಿದ್ದರು. ಅನೇಕ ಮೌಲ್ಯಯುತ ಸಾಹಿತ್ಯ ಕೃತಿಗಳು ಹೊರಬಂದಿವೆ. ಸರ್ವಧರ್ಮ ಸಹಿಷ್ಣುಗಳಾಗಿದ್ದರು.

ಚಿತ್ರಕಲೆಯಲ್ಲಿ ಸುರಪುರ ನಾಯಕ ಅರಸು ಮನೆತನಕ್ಕೆ ಅಗ್ರಸ್ಥಾನವಿತ್ತು. ಅಲ್ಲಿಯ ಚಿತ್ರಗಳ ತಂತ್ರ ಮತ್ತು ವಿನ್ಯಾಸ ಉನ್ನತ ಸ್ಥಾನ ಪಡೆದಿವೆ. ಮೈಸೂರಿನ ಸಾಂಪ್ರದಾಯಿಕ ಕಲಾಕೃತಿಗಳು, ವಿಜಯನಗರ ಶೈಲಿಯ ಚಿತ್ರಗಳು, ಬಿಜಾಪುರದ ಆದಿಲ್‌ಶಾಹಿ ಮನೆತನದವರಿಂದ ಮೂಡಿ ಬಂದ ಕಲಾಕೃತಿಗಳಿಗಿಂತ ಸುರಪುರ ನಾಯಕ ಅರಸರ ಕಲಾಕೃತಿಗಳು ತಮ್ಮದೇ ಆದ ವಿಶಿಷ್ಟತೆಯನ್ನು ಪಡೆದಿವೆ.

ಲಂಡನ್ನಿನ ಕಲಾ ಸಂಗ್ರಹಾಲಯ, ಇಂಗ್ಲೆಂಡಿನ ವಿವಿಧ ನಗರಗಳಲ್ಲಿ, ದೆಹಲಿ, ಮುಂಬೈ, ಹೈದರಾಬಾದ್‌ನ ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಸಾಲಾರಜಂಗ ವಸ್ತುಸಂಗ್ರಹಾಲಯದಲ್ಲಿ ಇಂತಹ ಕಲಾಕೃತಿಗಳನ್ನು ನೋಡಬಹುದು.

**ಕಾಲಗಣನೆ (ಸಾ. ಶ)**

1. ಸುರಪುರ ನಾಯಕರ ಆಳ್ವಿಕೆಯ ಕಾಲ- 1636-1858
2. ಪೀತಾಂಬರಿ ಬಹರಿಪಿಡ್ಡನಾಯಕ- 1687-1726
3. ನಾಲ್ವಡಿ ವೆಂಕಟಪ್ಪ ನಾಯಕ- 1843-1858
4. ಸುರಪುರ ಪತನ- ಫೆಬ್ರವರಿ 9, 1858
5. ಸುರಪುರ ಸಂಸ್ಥಾನ ಭಾರತದ ಒಕ್ಕೂಟ ಸೇರಿದುದು- ಸೆಪ್ಟೆಂಬರ್ 17, 1948.

## ಅಭ್ಯಾಸಗಳು

### I. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

1. ಸುರಪುರ ಸಂಸ್ಥಾನದ ಸ್ಥಾಪಕ ಯಾರು?
2. ಸುರಪುರ ರಾಜಧಾನಿಯನ್ನು ನಿರ್ಮಿಸಿದ ಅರಸನ ಹೆಸರೇನು?

### II. ಈ ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿರಿ.

1. ನಾಲ್ವಡಿ ವೆಂಕಟಪ್ಪ ನಾಯಕನ ಸಾಧನೆಯ ಕುರಿತು ಟಿಪ್ಪಣಿ ಬರೆಯಿರಿ.
2. ಸುರಪುರ ನಾಯಕರ ಸಾಂಸ್ಕೃತಿಕ ಕೊಡುಗೆಗಳನ್ನು ವಿವರಿಸಿರಿ.

## ಯಲಹಂಕ ನಾಡಪ್ರಭುಗಳು

ಯಲಹಂಕ ನಾಡಪ್ರಭುಗಳ ಮನೆತನದ ಸ್ಥಾಪಕ ರಣಭೈರೇಗೌಡ. ರಣಭೈರೇಗೌಡನ ನಂತರ ಜಯಗೌಡ, ಗಿಡ್ಡೇಗೌಡ, ಕೆಂಪನಂಜೇಗೌಡ ಮೊದಲಾದವರು ಆಳ್ವಿಕೆ ನಡೆಸುತ್ತಾರೆ. ಈ ಮನೆತನದ ಅತ್ಯಂತ ಜನಪ್ರಿಯ ವ್ಯಕ್ತಿ ಹಿರಿಯ ಕೆಂಪೇಗೌಡ. ಆದ್ದರಿಂದ ಯಲಹಂಕ ನಾಡಪ್ರಭುಗಳು ಕೆಂಪೇಗೌಡ ಮನೆತನದವರೆಂದೇ ಪ್ರಸಿದ್ಧರು. ಇವರು ವಿಜಯನಗರದ ಅರಸರಲ್ಲಿ ನಾಡಪ್ರಭುಗಳಾಗಿದ್ದರು. ಇವರು 16-18ನೇ ಶತಮಾನಗಳ ಕಾಲಾವಧಿಯಲ್ಲಿ ಬೆಂಗಳೂರು, ರಾಮನಗರ, ತುಮಕೂರು ಮತ್ತು ಅವಿಭಜಿತ ಕೋಲಾರ ಜಿಲ್ಲೆಗಳ ಕೆಲವು ಭಾಗಗಳನ್ನು ಆಳಿದರು. ಬೆಂಗಳೂರಿಗೆ ಮೊದಲು ಯಲಹಂಕ ಇವರ ರಾಜಧಾನಿಯಾದ್ದರಿಂದ ಯಲಹಂಕ ನಾಡಪ್ರಭುಗಳು ಎಂದು ಕರೆಸಿಕೊಂಡರು. ನಂತರ ಬೆಂಗಳೂರು ಮತ್ತು ಮಾಗಡಿ ಇವರ ರಾಜಧಾನಿಯಾಗಿದ್ದವು.

ಹಿರಿಯ ಕೆಂಪೇಗೌಡ (ಸುಮಾರು ಸಾ. ಶ. 1532-1597): ಹಿರಿಯ ಕೆಂಪೇಗೌಡ ಬೆಂಗಳೂರು ನಗರವನ್ನು ಸಾ. ಶ 1537 ರಲ್ಲಿ ಸ್ಥಾಪಿಸಿದನು. ಈತನು ಬೆಂಗಳೂರಿನಲ್ಲಿ ಕೋಟೆಯೊಂದನ್ನು ಕಟ್ಟಿ ಅಲ್ಲಿಂದ ಆಳ್ವಿಕೆ ನಡೆಸಿದ. ಬೆಂಗಳೂರಿನ ಬಸವನಗುಡಿಯ ಬಸವನ ದೇವಾಲಯ, ಹಲಸೂರಿನ ಸೋಮೇಶ್ವರ ದೇವಾಲಯಗಳ ರಚನೆ ಹಾಗೂ ಗವಿಗಂಗಾಧರೇಶ್ವರ ದೇವಾಲಯದ ವಿಸ್ತರಣೆ ಈತನ ಸಾಧನೆಯಾಗಿದೆ. ಬೆಂಗಳೂರಿನಲ್ಲಿ ಅನೇಕ ಕೆರೆಗಳನ್ನು ನಿರ್ಮಿಸಿದ ಕೀರ್ತಿ ಈತನಿಗೆ ಸಲ್ಲುತ್ತದೆ. ಅವುಗಳಲ್ಲಿ ಕೆಂಪಾಂಬುಧಿ ಕೆರೆ, ಧರ್ಮಾಂಬುಧಿ ಕೆರೆ, ಹಲಸೂರು ಕೆರೆ ಹಾಗೂ ಸಂಪಂಗಿ ಕೆರೆ ಪ್ರಮುಖವಾದವುಗಳು. ಶಿವಗಂಗೆಯ ಗಂಗಾಧರೇಶ್ವರನ ಪರಮ ಭಕ್ತನಾದ ಹಿರಿಯ ಕೆಂಪೇಗೌಡನು ಅನೇಕ ಛತ್ರ ಮತ್ತು ಅಗ್ರಹಾರಗಳನ್ನು ಕಟ್ಟಿಸಿದನು. ಧರ್ಮಪ್ರಭುವಾಗಿ ಆಳಿದ ಇವನಿಗೆ 'ಪ್ರಜಾವತ್ಸಲ' ಎಂಬ ಬಿರುದಿತ್ತು.

ಇಮ್ಮಡಿ ಕೆಂಪೇಗೌಡ (ಸುಮಾರು ಸಾ. ಶ. 1597-1641): ಇಮ್ಮಡಿ ಕೆಂಪೇಗೌಡನು ಹಿರಿಯ ಕೆಂಪೇಗೌಡನ ಮಗ. ಇವನ ಕಾಲದಲ್ಲಿ ವಿಜಯಪುರದ ಆದಿಲ್ ಷಾಹಿಗಳ ದಂಡನಾಯಕನಾದ ರಣದುಲ್ಲಾಖಾನ್ ಸಾ. ಶ 1638 ರಲ್ಲಿ ಬೆಂಗಳೂರನ್ನು ವಶಪಡಿಸಿಕೊಂಡನು. ಅನಂತರ ಇಮ್ಮಡಿ ಕೆಂಪೇಗೌಡನು ಮಾಗಡಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಮಾಗಡಿ ಮತ್ತು ಕುಣಿಗಲ್ ಸೀಮೆಗಳನ್ನು ಆಳತೊಡಗಿದನು. ಹೀಗಾಗಿ ಈ ಮನೆತನದ ದೊರೆಗಳನ್ನು ಮಾಗಡಿ ಕೆಂಪೇಗೌಡರೆಂದು ಕರೆಯುವ ವಾಡಿಕೆಯಿದೆ. ಎರಡನೇ ಕೆಂಪೇಗೌಡನು ಬೆಂಗಳೂರು ನಗರದ ಎಲ್ಲೆಕಟ್ಟುಗಳನ್ನು ಗುರುತಿಸಿ ನಾಲ್ಕು ಕಾವಲು ಗೋಪುರಗಳನ್ನು ಕಟ್ಟಿಸಿದನು. ಇವನ ಕಾಲದಲ್ಲಿ ಬೆಂಗಳೂರು ನೇಯ್ಗೆಯ ದೊಡ್ಡ ಕೇಂದ್ರವಾಗಿ ಬೆಳೆಯಿತು. ಮಾಗಡಿ, ಸಾವನದುರ್ಗ, ಹುಲಿಯೂರುದುರ್ಗ, ಹುತ್ರಿದುರ್ಗ ಮೊದಲಾದ ಕೋಟೆಗಳನ್ನು ಕಟ್ಟಿಸಿದನು. ತನ್ನ ತಂದೆಯಂತೆ ಇವನು ಕೂಡ ಹೊಸ ಹಳ್ಳಿಗಳು, ದೇವಾಲಯಗಳು ಮತ್ತು ಕೆರೆಗಳನ್ನು ನಿರ್ಮಾಣ ಮಾಡಿಸಿದನು.

ಇಮ್ಮಡಿ ಕೆಂಪೇಗೌಡನು ತನ್ನ ಮಕ್ಕಳಾದ ಮುಮ್ಮಡಿ ಕೆಂಪೇಗೌಡನಿಗೆ ಮಾಗಡಿ ಸೀಮೆಯನ್ನು, ಇಮ್ಮಡಿ ಹಿರಿಯ ಕೆಂಪೇಗೌಡನಿಗೆ ಕುಣಿಗಲ್ ಸೀಮೆಯನ್ನು ವಹಿಸಿಕೊಟ್ಟನು. ಮುಮ್ಮಡಿ ಕೆಂಪೇಗೌಡನು (ಸುಮಾರು ಸಾ. ಶ. 1641-1674) ನಾಡಿಗೆ ಬರಗಾಲ ಬಂದಿತೆಂದು ಕೆಂಪಸಾಗರ ಎಂಬ ಕೆರೆಯನ್ನು ನಿರ್ಮಾಣ ಮಾಡಿಸಿದನು. ಇಮ್ಮಡಿ ಹಿರಿಯ ಕೆಂಪೇಗೌಡನು (ಸುಮಾರು ಸಾ. ಶ. 1641-1662) ವೀರನು ಮಾತ್ರವಲ್ಲ, ಬಹುಭಾ ಷಾ ಪಂಡಿತನಾಗಿದ್ದನು. ಇವನಿಗೆ 'ನವ ಕವಿತಾ ಗುಂಭಪುಂಭವಾಣಿ' ಎಂಬ ಬಿರುದಿತ್ತು. ಇವನ ರಾಣಿಯರು ಕುಣಿಗಲ್ ಮತ್ತು ಹುಲಿಯೂರು ದುರ್ಗಗಳಲ್ಲಿ ಅಗ್ರಹಾರ, ಕೆರೆ, ದೇವಾಲಯಗಳನ್ನು ಕಟ್ಟಿಸಿದರು.

ಮುಂದೆ, ಯಲಹಂಕ ನಾಡಪ್ರಭುಗಳ ಆಳ್ವಿಕೆಯ ಪ್ರದೇಶಗಳು ಮೈಸೂರು ಸಂಸ್ಥಾನದೊಂದಿಗೆ

ಸೇರ್ಪಡೆಯಾಯಿತು.

**ಕಾಲಗಣನೆ (ಸಾ. ಶ)**

ಹಿರಿಯ ಕೆಂಪೇಗೌಡ- ಸುಮಾರು ಸಾ. ಶ. 1532-1597

ಇಮ್ಮಡಿ ಕೆಂಪೇಗೌಡ- ಸುಮಾರು ಸಾ. ಶ. 1597-1641

ಮುಮ್ಮಡಿ ಕೆಂಪೇಗೌಡ- ಸುಮಾರು ಸಾ. ಶ. 1641-1674

ಇಮ್ಮಡಿ ಹಿರಿಯ ಕೆಂಪೇಗೌಡ- ಸುಮಾರು ಸಾ. ಶ. 1641-1662

**ನಿಮಗೆ ತಿಳಿದಿರಲಿ**

ಇಮ್ಮಡಿ ಕೆಂಪೇಗೌಡನು ಕಟ್ಟಿಸಿದ ಕಾವಲು ಗೋಪುರಗಳು ಇಲ್ಲಿವೆ: ಉತ್ತರದಲ್ಲಿ- ಮೇಖ್ರಿವೃತ್ತ; ದಕ್ಷಿಣದಲ್ಲಿ- ಲಾಲ್‌ಬಾಗ್; ಪೂರ್ವದಲ್ಲಿ- ಅಲಸೂರು; ಮತ್ತು ಪಶ್ಚಿಮದಲ್ಲಿ- ಗವಿಗಂಗಾಧರೇಶ್ವರ.

## ಅಭ್ಯಾಸಗಳು

**I. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

1. ಯಲಹಂಕ ನಾಡಪ್ರಭುಗಳ ಮನೆತನದ ಸ್ಥಾಪಕ ಯಾರು?
2. ಬೆಂಗಳೂರು ನಗರದ ಸ್ಥಾಪಕ ಯಾರು?
3. ಯಲಹಂಕ ನಾಡ ಪ್ರಭುಗಳ ರಾಜಧಾನಿಗಳನ್ನು ಹೆಸರಿಸಿ.
4. ಇಮ್ಮಡಿ ಹಿರಿಯ ಕೆಂಪೇಗೌಡನಿಗಿದ್ದ ಬಿರುದು ಯಾವುದು?

**II. ಈ ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯದಲ್ಲಿ ಉತ್ತರಿಸಿರಿ.**

1. ಹಿರಿಯ ಕೆಂಪೇಗೌಡನ ಸಾಧನೆಗಳು ಯಾವುವು?
2. ಇಮ್ಮಡಿ ಕೆಂಪೇಗೌಡನನ್ನು ಕುರಿತು ಟಿಪ್ಪಣಿ ಬರೆಯಿರಿ.

ಚಟುವಟಿಕೆ: ಯಲಹಂಕ ನಾಡಪ್ರಭುಗಳು ಬೆಂಗಳೂರು ಹಾಗೂ ಸುತ್ತಮುತ್ತ ಅನೇಕ ಕೆರೆಗಳನ್ನು ನಿರ್ಮಿಸಿದರು. ಇಂದು ಹೆಚ್ಚಿನ ಕೆರೆಗಳು ಮಾಯವಾಗಿವೆ ಇದರ ಪರಿಣಾಮವೇನೆಂಬ ವಿಚಾರ ಚರ್ಚಿಸಿ ಸರ್ಕಾರಕ್ಕೆ ಕಳುಹಿಸಲು ಒಂದು ವರದಿ ತಯಾರಿಸಿ.

# ಪಾಠ-5: ಮೈಸೂರು ಒಡೆಯರು

## ಪಾಠದ ಪರಿಚಯ

ಮೈಸೂರು ಒಡೆಯರ ರಾಜಮನೆತನವನ್ನು ಪರಿಚಯಿಸುವುದು. ಅನಂತರ ಹೈದರಾಲಿ ಮತ್ತು ಟಿಪ್ಪುಸುಲ್ತಾನರನ್ನು ಪರಿಚಯಿಸುವುದು. ನಾಲ್ವಡಿ ಕೃಷ್ಣರಾಜ ಒಡೆಯರು ಸೇರಿದಂತೆ ಪ್ರಮುಖ ಒಡೆಯರನ್ನು ಪರಿಚಯಿಸುವುದು. ಹಾಗೆಯೇ ಪ್ರಮುಖ ದಿವಾನರುಗಳನ್ನು ಪರಿಚಯಿಸುವುದು.

ಮೈಸೂರು ಒಡೆಯರು ವಿಜಯನಗರ ಅರಸು ಮನೆತನದ ಪರಂಪರೆಯನ್ನು ಮುಂದುವರೆಸಿ, ಸಮಾಜ- ಸಂಸ್ಕೃತಿಗೆ ಅಪಾರ ಸೇವೆ ಸಲ್ಲಿಸಿದರು. ಸುದೀರ್ಘಕಾಲ ಆಳ್ವಿಕೆ ನಡೆಸಿ ನಾಡಿನ ಜನರ ಪ್ರೀತಿ ಗೌರವಗಳಿಗೆ ಪಾತ್ರರಾದರು.

## ಸಾಮರ್ಥ್ಯಗಳು

1. sಚಿಕ್ಕದೇವರಾಜನ ಜನಮುಖಿ ಸಾಧನೆಗಳನ್ನು ಮೆಚ್ಚುವುದು.
2. ಬ್ರಿಟಿಷರ ವಿರುದ್ಧ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ನಡೆಸಿದ ಹೋರಾಟಗಳ ಕಾರಣ ಮತ್ತು ಪರಿಣಾಮಗಳನ್ನು ಅರ್ಥೈಸಿಕೊಳ್ಳುವುದು.
3. ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಅವರ ಸಾಧನೆಗಳನ್ನು ತಿಳಿಯುವುದು.
4. ನಾಲ್ವಡಿ ಕೃಷ್ಣರಾಜ ಒಡೆಯರ ಸಮಾಜಮುಖಿ ಸಾಧನೆಗಳನ್ನು ಅರಿಯುವುದು.
5. ಭೂಪಟದಲ್ಲಿ ಮೈಸೂರು ರಾಜ್ಯದ ಚಾರಿತ್ರಿಕ ಸ್ಥಳಗಳನ್ನು ಗುರುತಿಸುವುದು.

## ಪ್ರಮುಖ ಮೈಸೂರು ಒಡೆಯರು

ಯದುರಾಯ ಮೈಸೂರು ಒಡೆಯರ ಮೊದಲ ದೊರೆ (ಸಾ. ಶ. 1399-1423). ರಾಜ್ಯದ ಲಾಂಛನ ಗಂಡಭೇರುಂಡ. ಒಡೆಯರ ಆರಂಭಿಕ ರಾಜಧಾನಿ ಶ್ರೀರಂಗಪಟ್ಟಣವಾಗಿತ್ತು.

**ಚಿಕ್ಕದೇವರಾಜ ಒಡೆಯರು (ಸಾ. ಶ. 1673-1704)**



ಚಿಕ್ಕದೇವರಾಜ ಒಡೆಯರು

ಆರಂಭಿಕ ಅರಸರಲ್ಲಿ ಚಿಕ್ಕದೇವರಾಜ ಒಡೆಯರು ಪ್ರಮುಖರು. ಇವರು ಜನಮುಖಿ ಸಾಧನೆಗಳನ್ನು ಮಾಡಿದರು. ಚಿಕ್ಕದೇವರಾಜ ಒಡೆಯರು ಹದಿನೆಂಟು ಶಾಖೆಗಳುಳ್ಳ 'ಅಠಾರ' ಕಛೇರಿಯನ್ನು ತೆರೆದರು. ಶ್ರೀರಂಗಪಟ್ಟಣದ ಬಳಿ ಪಶ್ಚಿಮದಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ಅಣೆಕಟ್ಟೆ ನಿರ್ಮಿಸಿ ಕೃಷಿಗೆ ನೀರು ಒದಗಿಸಿದರು. ಇವರು ಆಡಳಿತದಲ್ಲಿ ಮಿತವ್ಯಯ ಜಾರಿಗೆ ತಂದು, ರಾಜ್ಯದ ಭಂಡಾರವನ್ನು ಶ್ರೀಮಂತಗೊಳಿಸಿ 'ನವಕೋಟಿ ನಾರಾಯಣ' ಎಂಬ ಬಿರುದಿಗೆ ಪಾತ್ರರಾದರು.

ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಮೈಸೂರು ಸಂಪದ್ಭರಿತ ರಾಜ್ಯವಾಗಿತ್ತು. ಇವರ ಮರಣ ನಂತರ ದುರ್ಬಲ ಅರಸರು ಆಳಿದರು. ಇದರಿಂದಾಗಿ ದಳವಾಯಿಗಳೆಂಬ ಅಧಿಕಾರಿಗಳು ಆಡಳಿತವನ್ನು ರಾಜನ ಹೆಸರಿನಲ್ಲಿ ನಡೆಸಿದರು.

## ಹೈದರಾಲಿ ಮತ್ತು ಟಿಪ್ಪು ಸುಲ್ತಾನ್



ಹೈದರಾಲಿ (ಸಾ. ಶ. 1761-1782):



ಹೈದರಾಲಿ

ಹೈದರಾಲಿಯು ದಳವಾಯಿ ನಂಜರಾಜಯ್ಯನ ಸೇನೆಯಲ್ಲಿದ್ದ ಸಮರ್ಥ ಸೇನಾನಿಯಾಗಿದ್ದನು. ಶೂರನೂ, ಸಾಹಸಿಯೂ ಆಗಿದ್ದನು. ಯುದ್ಧಗಳಲ್ಲಿ ಜಯಗಳಿಸಿ ಹಂತಹಂತವಾಗಿ ತನ್ನ ಸೇನಾಬಲ ಮತ್ತು ಧನಬಲವನ್ನು ಹೆಚ್ಚಿಸಿಕೊಂಡನು. ಹೀಗೆ ರಾಜನ ಗೌರವಕ್ಕೆ ಪಾತ್ರನಾದನು. ಅಲ್ಲದೆ, ಮೈಸೂರು ರಾಜ್ಯವನ್ನು ಸಂದಿಗ್ಧ ರಾಜಕೀಯದಿಂದ ಪಾರುಮಾಡಿದನು. ರಾಜಧಾನಿಯಲ್ಲಿ ಸೈನಿಕ ಬಂಡಾಯ ಕಾಣಿಸಿಕೊಂಡಾಗ ಹೈದರಾಲಿ ದಳವಾಯಿ ನಂಜರಾಜನನ್ನು ನಿವೃತ್ತಿಗೊಳಿಸಿ ರಾಜ್ಯಾಧಿಕಾರವನ್ನು ಕೈಗೆತ್ತಿಕೊಂಡನು. ರಾಜ್ಯದ ಕಾರ್ಯಕರ್ತನೆಂದು ಕರೆದುಕೊಂಡು ಎರಡನೆಯ ಕೃಷ್ಣರಾಜ ಒಡೆಯರನ್ನು ಬದಿಗೊತ್ತಿದನು.

ಅಧಿಕಾರ ವಹಿಸಿಕೊಂಡ ಒಡನೆಯೇ ಹೈದರಾಲಿಯು ರಾಜ್ಯದ ವಿಸ್ತರಣೆಯಲ್ಲಿ ತೊಡಗಿದನು. ಕೆಳದಿ ರಾಜರನ್ನು ಸೋಲಿಸಿದನು. ಅಲ್ಲಿನ ಅಪಾರವಾದ ಧನಕನಕಾದಿಗಳನ್ನು ವಶಪಡಿಸಿಕೊಂಡು ತನ್ನ ಧನಬಲವನ್ನು ಇನ್ನಷ್ಟು ಹೆಚ್ಚಿಸಿಕೊಂಡನು. ಚಿತ್ರದುರ್ಗ ಕೋಟೆಯನ್ನು ಪ್ರಯಾಸದಿಂದ ವಶಪಡಿಸಿಕೊಂಡನು.

ಬ್ರಿಟಿಷರೊಂದಿಗೆ ಹೋರಾಟ: ವ್ಯಾಪಾರಿಗಳಾಗಿ ಭಾರತಕ್ಕೆ ಬಂದಿದ್ದ ಬ್ರಿಟಿಷರು ಕ್ರಮೇಣ ರಾಜಕೀಯ ಶಕ್ತಿಯಾಗಿ ಎದ್ದುನಿಂತರು. ಹೈದರಾಲಿ ದಕ್ಷಿಣ ಭಾರತದಲ್ಲಿ ರಾಜ್ಯ ವಿಸ್ತರಣೆ ಮಾಡುವುದನ್ನು ಅವರು ಸಹಿಸದಾದರು. ಹೀಗಾಗಿ ಹೈದರಾಲಿ ಮತ್ತು ಬ್ರಿಟಿಷರ ನಡುವೆ ಸಂಘರ್ಷ ಅನಿವಾರ್ಯವಾಯಿತು.

(ಹೈದರಾಲಿ ಮತ್ತು ಅವನ ಮಗನಾದ ಟಿಪ್ಪು ಸುಲ್ತಾನ್ ಬ್ರಿಟಿಷರೊಡಲೆ ಮಾಡಿದ ನಾಲ್ಕು ಯುದ್ಧಗಳನ್ನು 'ಆಂಗ್ಲೋ ಮೈಸೂರು ಯುದ್ಧಗಳು' ಅಥವಾ 'ಮೈಸೂರು ಯುದ್ಧಗಳು' ಎನ್ನುವರು.)

ಮೊದಲನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಹೈದರಾಲಿಯ ಆಕ್ರಮಣದಿಂದ ಬ್ರಿಟಿಷರು ಅಪಾರ ಹಾನಿಗೊಳಗಾದರು. ಅನಿವಾರ್ಯವಾಗಿ ಬ್ರಿಟಿಷರು ಮದ್ರಾಸ್

ಒಪ್ಪಂದಕ್ಕೆ ಮುಂದಾದರು. ಮದ್ರಾಸ್ ಒಪ್ಪಂದದ ಮುಖ್ಯ ತಿರುಳೆಂದರೆ, ಹೈದರಾಲಿ ಅಥವಾ ಬ್ರಿಟಿಷರ ಮೇಲೆ ಯಾವುದೇ ಶತ್ರು ರಾಜ್ಯ ಆಕ್ರಮಣ ಮಾಡಿದಲ್ಲಿ ಪರಸ್ಪರ ರಾಜ್ಯಗಳು ನೆರವಿಗೆ ಧಾವಿಸಬೇಕು ಎಂಬುದಾಗಿತ್ತು. ಈ ಒಪ್ಪಂದವು ಹೈದರಾಲಿಯ ಘನತೆಯನ್ನು ಹೆಚ್ಚಿಸಿತು.

ಕೆಲವು ವರ್ಷಗಳ ನಂತರ ಮರಾಠರು ಮೈಸೂರಿನ ಮೇಲೆ ಆಕ್ರಮಣ ಮಾಡಿದರು. ಆ ಸಂದರ್ಭದಲ್ಲಿ ಮದ್ರಾಸ್ ಒಪ್ಪಂದದಂತೆ ಬ್ರಿಟಿಷರು ಹೈದರಾಲಿಯ ಸಹಾಯಕ್ಕೆ ಧಾವಿಸದೆ ತಟಸ್ಥರಾದರು. ಇದರಿಂದ ಹೈದರಾಲಿ ಸಿಡಿಮಿಡಿಗೊಂಡು ಬ್ರಿಟಿಷರನ್ನು ಯುದ್ಧಕ್ಕೆಳೆದನು. ಈ ಯುದ್ಧವೇ ಎರಡನೇ ಆಂಗ್ಲೋ ಮೈಸೂರು ಯುದ್ಧ. ಯುದ್ಧ ನಡೆಯುತ್ತಿದ್ದಾಗಲೇ ಹೈದರಾಲಿಯು ಅನಾರೋಗ್ಯದಿಂದ ಮರಣವನ್ನಪ್ಪಿದನು. ಯುದ್ಧವನ್ನು ಟಿಪ್ಪು ಸುಲ್ತಾನ್‌ನು ಮುಂದುವರೆಸಿದನು.

ಹೈದರಾಲಿ ಮತ್ತು ಅವನ ಮಗನಾದ ಟಿಪ್ಪು ಸುಲಾನ್ ಬ್ರಿಟಿಷರೊಡನೆ ಮಾಡಿದ ನಾಲ್ಕು ಯುದ್ಧಗಳನ್ನು 'ಆಂಗ್ಲೋ ಮೈಸೂರು ಯುದ್ಧಗಳು' ಅಥವಾ 'ಮೈಸೂರು ಯುದ್ಧಗಳು' ಎನ್ನುವರು.

ಹೈದರಾಲಿಯ ಸಾಧನೆಗಳು: ಹೈದರಾಲಿ ಸಮಕಾಲೀನ ರಾಜಕೀಯವನ್ನು ಚೆನ್ನಾಗಿ ತಿಳಿದುಕೊಂಡಿದ್ದನು. ಇವನಿಗೆ ಓದುಬರಹ ಬರುತ್ತಿರಲಿಲ್ಲವಾದರೂ ಕನ್ನಡ ಸೇರಿದಂತೆ ಹಲವು ಭಾಷೆಗಳನ್ನು ಚೆನ್ನಾಗಿ ಬಲ್ಲವನಾಗಿದ್ದನು. ಇವನು ಮೈಸೂರು ರಾಜ್ಯದ ವಿಸ್ತಾರವನ್ನು ಇಮ್ಮಡಿಗೊಳಿಸಿದನು. ಶೂರ ಯೋಧನೂ ದಕ್ಷ ಆಡಳಿತಗಾರನೂ ಆಗಿದ್ದನು. ಹೈದರಾಲಿಗೆ ಕರ್ನಾಟಕ ಇತಿಹಾಸದಲ್ಲಿ ಪ್ರಮುಖ ಸ್ಥಾನವಿದೆ. ಬೆಂಗಳೂರಿನ ಸುಂದರ ಉದ್ಯಾನವನ ಲಾಲ್‌ಬಾಗ್ ಇವನಿಂದಲೇ ಆರಂಭವಾಯಿತು.

### ಟಿಪ್ಪು ಸುಲ್ತಾನ್ (ಸಾ. ಶ. 1782-1799)

ಹೈದರಾಲಿಯ ಮಗನೇ ಟಿಪ್ಪು ಸುಲಾನ್. ತನ್ನ ತಂದೆಯ ಕಾಲದ ಯುದ್ಧಗಳಲ್ಲಿ ಪಾಲ್ಗೊಂಡು ವಿಜಯವನ್ನು ಗಳಿಸಿದ ಟಿಪ್ಪು ಸುಲ್ತಾನ್ ಧೀರ ತರುಣನಾಗಿದ್ದನು. ತನ್ನನ್ನು ಸುಲ್ತಾನನೆಂದು ಘೋಷಿಸಿ ಕೊಂಡನು.



ತಂದೆಯ ಮರಣಾನಂತರ ಆಗ ನಡೆಯುತ್ತಿದ್ದ ಎರಡನೇ ಆಂಗ್ಲೋಮೈಸೂರು ಯುದ್ಧವನ್ನು ಟಿಪ್ಪು ಮುಂದುವರೆಸಿದನು. ಆತನ ಸಹಾಯಕ್ಕೆ ಯಾರೂ ಬರಲಿಲ್ಲ. ಟಿಪ್ಪು

ಏಕಾಂಗಿಯಾಗಿ ಬ್ರಿಟಿಷರನ್ನು ಎದುರಿಸಿದನು. ಅಂತಿಮವಾಗಿ ಬ್ರಿಟಿಷರು 'ಮಂಗಳೂರು ಶಾಂತಿ ಒಪ್ಪಂದ' ಮಾಡಿಕೊಂಡರು. ಮಂಗಳೂರು ಒಪ್ಪಂದ ಉಭಯ ಪಕ್ಷದವರಿಗೂ ಹಿತಕರವಾಗಿದ್ದಿತು. ಇಬ್ಬರೂ ಗೆದ್ದಿದ್ದ ಪ್ರದೇಶಗಳನ್ನು ಬಿಟ್ಟುಕೊಟ್ಟು ಯುದ್ಧ ಖೈದಿಗಳನ್ನು ಹಿಂತಿರುಗಿಸಿದರು. ಇದು ಟಿಪ್ಪುವಿನ ಘನತೆಯನ್ನು ಹೆಚ್ಚಿಸಿತು.

ಅಲ್ಪಕಾಲದಲ್ಲಿಯೇ ಟಿಪ್ಪು ಮತ್ತು ಬ್ರಿಟಿಷರ ನಡುವೆ ಇನ್ನೆರಡು ಯುದ್ಧಗಳು ನಡೆದವು. ಟಿಪ್ಪು ಮತ್ತು ಬ್ರಿಟಿಷರ ನಡುವಣ ಪರಸ್ಪರ ದ್ವೇಷ ಮತ್ತು ಅಪನಂಬಿಕೆಯೇ ಈ ಯುದ್ಧಗಳಿಗೆ ಮೂಲ ಕಾರಣವಾಗಿತ್ತು.

ಮೂರನೆಯ ಆಂಗ್ಲೋ ಮೈಸೂರು ಯುದ್ಧದಲ್ಲಿ ಬ್ರಿಟಿಷರು ಆಕ್ರಮಣ ಮಾಡುತ್ತಾ ರಾಜಧಾನಿಯಾದ ಶ್ರೀರಂಗಪಟ್ಟಣವನ್ನು ಮುತ್ತಿಗೆ ಹಾಕಿದರು. ಬೇರೆ ಮಾರ್ಗ ತೋಚದೆ ಟಿಪ್ಪು ಬ್ರಿಟಿಷರೊಡನೆ ಶ್ರೀರಂಗಪಟ್ಟಣ ಶಾಂತಿ ಒಪ್ಪಂದ ಮಾಡಿಕೊಂಡನು. ಶಾಂತಿ ಒಪ್ಪಂದದಂತೆ ಇವನು ತನ್ನ ಅರ್ಧರಾಜ್ಯವನ್ನು ಬ್ರಿಟಿಷರಿಗೆ ಒಪ್ಪಿಸಿದನು. ಯುದ್ಧ ನಷ್ಟವಾಗಿ 330 ಲಕ್ಷ ರೂಪಾಯಿ ಪರಿಹಾರ ಧನವನ್ನು ಅವರಿಗೆ ನೀಡಬೇಕಾಯಿತು. ಅದನ್ನು ಕೊಡುವವರೆಗೆ ತನ್ನಿಬ್ಬರು ಮಕ್ಕಳನ್ನು ಬ್ರಿಟಿಷರಿಗೆ ಒತ್ತೆಯಾಳಾಗಿ ಕೊಡಬೇಕಾಯಿತು.

ಯುದ್ಧದ ಪರಿಣಾಮವಾಗಿ ಟಿಪ್ಪು ಅವಮಾನಗೊಂಡನು. ಬ್ರಿಟಿಷರನ್ನು ಭಾರತದಿಂದ ಹೊರದಬ್ಬಲು ದೃಢಸಂಕಲ್ಪ ಮಾಡಿದನು. ಇದು ನಾಲ್ಕನೆಯ ಆಂಗ್ಲೋ ಮೈಸೂರು ಯುದ್ಧಕ್ಕೆ ನಾಂದಿಯಾಯಿತು. ಯುದ್ಧದಲ್ಲಿ ಶ್ರೀರಂಗಪಟ್ಟಣವು ಮುತ್ತಿಗೆಗೊಳಗಾಯಿತು. ಟಿಪ್ಪು ವೀರಾವೇಶದಿಂದ ಹೋರಾಡುತ್ತಲೇ 1799 ರಲ್ಲಿ ಅಸುನೀಗಿದನು. ಟಿಪ್ಪುವು 'ಮೈಸೂರಿನ ಹುಲಿ' ಯೆಂದು ಪ್ರಸಿದ್ಧನಾಗಿದ್ದಾನೆ.



ಟಿಪ್ಪು ಸುಲಾನನ ಮರಣಾನಂತರ ಮೈಸೂರು ರಾಜ್ಯ ಬ್ರಿಟಿಷರ ವಶವಾಯಿತು. ಬ್ರಿಟಿಷರು ಒಡೆಯರ್ ರಾಜವಂಶದ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ರಾಜ್ಯವನ್ನು ಹಸ್ತಾಂತರಿಸಿದರು. ಆದರೆ ಮೈಸೂರು ರಾಜ್ಯ ಬ್ರಿಟಿಷರ ಆಶ್ರಿತ ರಾಜ್ಯವಾಯಿತು.

**ಟಿಪ್ಪುವಿನ ವ್ಯಕ್ತಿತ್ವ ಮತ್ತು ಸಾಧನೆಗಳು**





1. ವಿಜ್ಞಾನ ಕ್ಷೇತ್ರದ ಸಾಧನೆಗಳ ಬಗ್ಗೆ ಅವನಿಗೆ ಉತ್ತಮ ತಿಳುವಳಿಕೆ ಇತ್ತು. ಅವನು ಒಳ್ಳೆಯ ಗ್ರಂಥಾಲಯವನ್ನು ಹೊಂದಿದ್ದನು. ಬೆಂಗಳೂರಿನ ಅರಮನೆ, ಶ್ರೀರಂಗಪಟ್ಟಣದ ಬೇಸಿಗೆ ಅರಮನೆ (ದರಿಯಾ ದೌಲತ್) ನಿರ್ಮಾಣವನ್ನು ಟಿಪ್ಪು ಮಾಡಿಸಿದನು. ಬೇಸಿಗೆ ಅರಮನೆಯ ಗೋಡೆ, ಚಾವಣಿ ಮತ್ತು ಕಂಬಗಳ ಮೇಲೆ ಚಾರಿತ್ರಿಕ ಸಂಗತಿಗಳನ್ನು ಆಕರ್ಷಕವಾಗಿ ಚಿತ್ರಿಸಲಾಗಿದೆ.
2. ಟಿಪ್ಪು ರಾಜ್ಯದ ಸಮೃದ್ಧಿಗಾಗಿ ಬಹಳವಾಗಿ ಶ್ರಮಿಸಿದನು. ರೇಷ್ಮೆ ವ್ಯವಸಾಯವನ್ನು ರಾಜ್ಯದಲ್ಲಿ ವ್ಯಾಪಕವಾಗಿ ಜನಪ್ರಿಯಗೊಳಿಸಿದ್ದು ಅವನ ಮುಖ್ಯ ಸಾಧನೆಯಾಗಿದೆ. ಫ್ರೆಂಚ್ ಅಧಿಕಾರಿಗಳ ನೆರವಿನಿಂದ ತನ್ನ ಸೈನ್ಯವನ್ನು ಆಧುನಿಕವಾಗಿ ಸಜ್ಜುಗೊಳಿಸಿದನು. ಶ್ರೀರಂಗಪಟ್ಟಣದಲ್ಲಿ ಫಿರಂಗಿಗಳನ್ನು ಎರಕ ಹೊಯ್ಯುತ್ತಿದ್ದರು. ಟಿಪ್ಪು ರಾಕೆಟ್ ಬಳಸುವ ತಂತ್ರಜ್ಞಾನವನ್ನು ಕರಗತ ಮಾಡಿಕೊಂಡದ್ದು ಒಂದು ವಿಶೇಷ.
3. ಟಿಪ್ಪು ಕೆಲವು ಹಿಂದೂ ದೇವಾಲಯಗಳಿಗೆ ದಾನದತ್ತಿಯನ್ನೂ ಶೃಂಗೇರಿ ಮಠಕ್ಕೆ ದೇಣಿಗೆಯನ್ನೂ ನೀಡಿದನು. ಅವನು ಭೂ ಹಿಡುವಳಿಯಲ್ಲಿ ಸುಧಾರಣೆ ಮಾಡಿ ರೈತರಿಗೆ ಸುಲಭ ಕಂತಿನ ಸಾಲ ಒದಗಿಸುವುದನ್ನು ಒಳಗೊಂಡಂತೆ ಅನೇಕ ಸೌಲಭ್ಯಗಳನ್ನು ಒದಗಿಸಿದನು.
4. ಶ್ರೀರಂಗಪಟ್ಟಣದಲ್ಲಿರುವ ಹೈದರಾಲಿಯ ಸಮಾಧಿ ಮತ್ತು ಜುಮ್ಮಾ ಮಸೀದಿ ಟಿಪ್ಪುವಿನ ಭವ್ಯ ನಿರ್ಮಾಣಗಳು. ಮಸೀದಿಯ ಉನ್ನತವಾದ ಮಿನಾರುಗಳು ಆಕರ್ಷಕವಾಗಿವೆ. ಶ್ರೀರಂಗಪಟ್ಟಣ ಮತ್ತು ಬೆಂಗಳೂರಿನಲ್ಲಿ ಟಂಕಶಾಲೆಗಳನ್ನು ನಿರ್ಮಿಸಿದನು.



**ಮುಮ್ಮಡಿ ಕೃಷ್ಣರಾಜ ಒಡೆಯರು (ಸಾ. ಶ. 1799-1831)**



ಮುಮ್ಮಡಿ ಕೃಷ್ಣರಾಜ ಒಡೆಯರು

ಟಿಪ್ಪು ಸುಲ್ತಾನನ ಮರಣದೊಂದಿಗೆ ಮೈಸೂರು ಇತಿಹಾಸದಲ್ಲಿ ಹೋರಾಟದ ಯುಗವು ಮುಕ್ತಾಯಗೊಂಡಿತು. ಬ್ರಿಟಿಷರು ಮೈಸೂರು ಸಂಸ್ಥಾನವನ್ನು ವಶಪಡಿಸಿಕೊಂಡು ನಾಲ್ಕು ಭಾಗಗಳಾಗಿ ವಿಭಾಗಿಸಿ ಬ್ರಿಟಿಷರು ಮತ್ತು ಅವರ ಮಿತ್ರರಾದ ಮರಾಠರು ಹಾಗೂ ನಿಜಾಮರು ಮೂರೂ ಭಾಗಗಳನ್ನು ಹಂಚಿಕೊಂಡರು. ಉಳಿದ ಒಂದು ಭಾಗವನ್ನು ಮೈಸೂರಿನ ಒಡೆಯರಿಗೆ ಬಿಟ್ಟುಕೊಟ್ಟರು. ಅಲ್ಲದೆ, ಮುಮ್ಮಡಿ ಕೃಷ್ಣರಾಜ ಒಡೆಯರನನ್ನು ಅಧಿಕಾರಕ್ಕೆ ತಂದರು. ಕೃಷ್ಣರಾಜರು ಇನ್ನೂ ಐದು ವರ್ಷದ ಬಾಲಕನಾಗಿದ್ದರಿಂದ ಆಡಳಿತವನ್ನು ಪೂರ್ಣಯ್ಯನವರಿಗೆ ವಹಿಸಿ ದಿವಾನರನ್ನಾಗಿ ನೇಮಿಸಲಾಯಿತು.

ಮುಮ್ಮಡಿ ಕೃಷ್ಣರಾಜ ಒಡೆಯರು ಶಿವಮೊಗ್ಗ ಜಿಲ್ಲೆಯ ನಗರ (ಬಿದನೂರು) ಪ್ರದೇಶದಲ್ಲಿ ದಂಗೆಯನ್ನು ಸರಿಯಾಗಿ ಹತ್ತಿಕ್ಕಲಿಲ್ಲವೆಂಬ ಕಾರಣದಿಂದ ಬ್ರಿಟಿಷರು 1831 ರಲ್ಲಿ ಅವರನ್ನು ಅಧಿಕಾರದಿಂದ ಕೆಳಗಿಳಿಸಿದರು. ಮೈಸೂರು ಸಂಸ್ಥಾನದಲ್ಲಿ ಕಮೀಷನರ್ ಆಡಳಿತವನ್ನು ಜಾರಿಗೆ ತಂದರು.

ಕಮೀಷನರುಗಳ ಆಡಳಿತ (ಸಾ. ಶ. 1831-1881), ಮಾರ್ಕ್‌ಕಬ್ಬನ್ (ಸಾ. ಶ. 1834-1861)



ಮಾರ್ಕ್‌ಕಬ್ಬನ್ ರಾಜ್ಯದಲ್ಲಿ ಅನೇಕ ಆಡಳಿತಾತ್ಮಕ ಸುಧಾರಣೆಗಳನ್ನು ಜಾರಿಗೆ ತಂದರು. ಇವರು ರಾಜಧಾನಿಯನ್ನು ಮೈಸೂರಿನಿಂದ ಬೆಂಗಳೂರಿಗೆ ವರ್ಗಾಯಿಸಿದರು. ಮೈಸೂರನ್ನು ಅನೇಕ ಆಡಳಿತ ಘಟಕಗಳಾಗಿ ವಿಭಾಗಿಸಿ, ಅವುಗಳನ್ನು ಸೂಪರಿಡೆಂಟರ ಮೇಲ್ವಿಚಾರಣೆಯಲ್ಲಿರಿಸಲಾಯಿತು. ಆಡಳಿತ ಘಟಕಗಳನ್ನು ಜಿಲ್ಲೆಗಳು ಮತ್ತು ತಾಲೂಕುಗಳನ್ನಾಗಿ ವಿಭಜಿಸಲಾಗಿತ್ತು. ನ್ಯಾಯಾಂಗ ಮತ್ತು ಪೊಲೀಸ್ ಇಲಾಖೆಗಳನ್ನು ಉತ್ತಮವಾಗಿ ಸಂಘಟಿಸಲಾಯಿತು. ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಜಾರಿಗೊಳಿಸಲಾಯಿತು.

ಹೊಸ ರಸ್ತೆಗಳು ನಿರ್ಮಾಣಗೊಂಡವು. ಅದರ ಪರಿಣಾಮದಿಂದ ರಾಜ್ಯದ ಎಲ್ಲಾ ಪ್ರಮುಖ ಪಟ್ಟಣಗಳು ಬೆಂಗಳೂರಿನೊಂದಿಗೆ ನೇರ ಸಂಪರ್ಕಹೊಂದಿದವು. ಸೇತುವೆಗಳು ನಿರ್ಮಾಣವಾದವು ಮತ್ತು ಟೆಲಿಗ್ರಾಫ್ ತಂತಿಗಳನ್ನೂ ಹಾಕಲಾಯಿತು. 1859 ರಲ್ಲಿ ಬೆಂಗಳೂರು ಹಾಗೂ ಜೋಲಾರಪೇಟೆ ಮಧ್ಯೆ ರೈಲು ಮಾರ್ಗವನ್ನು ಹಾಕಲಾರಂಭಿಸಿದರು. ಇದು ಮೈಸೂರು ರಾಜ್ಯದ ಪ್ರಥಮ ರೈಲು ಮಾರ್ಗವಾಗಿತ್ತು. ಇವರು 1861 ರಲ್ಲಿ ಕಮಿಷನರ್ ಹುದ್ದೆಗೆ ರಾಜೀನಾಮೆ ನೀಡಿದರು. ಇವರ ಹೆಸರಿನಲ್ಲಿ ಬೆಂಗಳೂರಿನಲ್ಲಿ ಕಬ್ಬನ್ ಉದ್ಯಾನವನವಿದೆ.

**ಲೂಯಿ ಬೆಂಥಾಮ್ ಬೌರಿಂಗ್ (ಸಾ. ಶ. 1862-1870)**



ಲೂಯಿ ಬೆಂಥಾಮ್ ಬೌರಿಂಗ್

ಲೂಯಿ ಬೆಂಥಾಮ್ ಬೌರಿಂಗ್ 1862 ರಲ್ಲಿ ಮುಖ್ಯ ಕಮೀಷನರಾಗಿ ಅಧಿಕಾರ ಸ್ವೀಕರಿಸಿದರು. ಇವರು ಮೈಸೂರು ರಾಜ್ಯದ ಸಮಗ್ರ ಆಡಳಿತವನ್ನು ಪುನರ್ಸಂಘಟಿಸಿದರು. ನಂದಿದುರ್ಗ, ನಗರ ಮತ್ತು ಅಷ್ಟಗ್ರಾಮಗಳು ಆಡಳಿತದ ಘಟಕಗಳಾಗಿದ್ದವು. ಈ ಘಟಕಗಳ ಮೇಲ್ವಿಚಾರಣೆಯನ್ನು ಕಮೀಷನರರು ನೋಡಿಕೊಳ್ಳುತ್ತಿದ್ದರು. ಭೂ-ಕಂದಾಯವನ್ನು ಸುಧಾರಿಸಲಾಯಿತು. ನ್ಯಾಯಾಂಗ ಮತ್ತು ಪೊಲೀಸ್ ಇಲಾಖೆಗಳನ್ನು ವ್ಯವಸ್ಥಿತವಾಗಿ ಸಂಘಟಿಸಲಾಯಿತು. ಸಾರ್ವಜನಿಕ ಶಿಕ್ಷಣ ಇಲಾಖೆಯೊಂದಿಗೆ ಶಿಕ್ಷಣದಲ್ಲಿ ಸುಧಾರಣೆಗಳನ್ನು ಜಾರಿಗೊಳಿಸಲಾಯಿತು. 1870 ರಲ್ಲಿ ಬೌರಿಂಗರು ಕಮಿಷನರ್ ಹುದ್ದೆಗೆ ರಾಜೀನಾಮೆ ನೀಡಿದರು. ಕಮಿಷನರ್ಗಳು ಮೈಸೂರು ರಾಜ್ಯದ ಅಭಿವೃದ್ಧಿಗೆ ಭದ್ರಬುನಾದಿಯನ್ನು ಹಾಕಿದರು.

**ಹತ್ತನೆಯ ಚಾಮರಾಜ ಒಡೆಯರು (ಸಾ. ಶ. 1881-1894)**



1881 ರಲ್ಲಿ ಹತ್ತನೆಯ ಚಾಮರಾಜ ಒಡೆಯರಿಗೆ ಬ್ರಿಟಿಷರು ರಾಜ್ಯವನ್ನು ಪುನಃ ವಹಿಸಿಕೊಟ್ಟರು. ಇದನ್ನು ಪುನರ್ದಾನ ಎನ್ನುವರು. ಹತ್ತನೆಯ ಚಾಮರಾಜ ಒಡೆಯರ ಕೈಕೆಳಗೆ ಸಿ. ರಂಗಾಚಾರ್ಲು ಹಾಗೂ ಕೆ. ಶೇಷಾದ್ರಿ ಐಯ್ಯರ್ರವರು ದಿವಾನರಾಗಿ ಆಡಳಿತ

ನಿರ್ವಹಿಸಿದರು. ಹತ್ತನೆಯ ಚಾಮರಾಜರ ಕಾಲದಲ್ಲಿ 'ಪ್ರಜಾಪ್ರತಿನಿಧಿ ಸಭೆ' ಯು (1881) ಆರಂಭವಾಯಿತು.

**ನಾಲ್ವಡಿ ಕೃಷ್ಣರಾಜ ಒಡೆಯರು (ಸಾ. ಶ. 1902-1940)**



ಹತ್ತನೆಯ ಚಾಮರಾಜ ಒಡೆಯರ್ ಕಲ್ಕತ್ತಾಗೆ ತೆರಳಿದ್ದಾಗ ಅಲ್ಲಿಯೇ ಅನಾರೋಗ್ಯದಿಂದ ನಿಧನರಾದರು. ಅವರ ಉತ್ತರಾಧಿಕಾರಿಯಾದವರು ನಾಲ್ವಡಿ ಕೃಷ್ಣರಾಜ ಒಡೆಯರು. ಇವರು ಅಧಿಕಾರಕ್ಕೆ ಬಂದಾಗ (1895) ಕೇವಲ ಹನ್ನೊಂದು ವರ್ಷದ ಬಾಲಕರಾದ್ದರಿಂದ ತಾಯಿ ಕೆಂಪ ನಂಜಮ್ಮಣ್ಣಿಯವರು ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. 1902 ರಿಂದ ನಾಲ್ವಡಿ ಅವರ ನೇರ ಆಳ್ವಿಕೆ ಆರಂಭವಾಗುತ್ತದೆ. ಉತ್ತಮ ಶಿಕ್ಷಣ ಪಡೆದ ಇವರು ಮೈಸೂರು ಸಂಸ್ಥಾನವನ್ನು ತಮ್ಮ ಸುದೀರ್ಘ ಆಳ್ವಿಕೆಯ ಕಾಲದಲ್ಲಿ ಮಾದರಿ ಸಂಸ್ಥಾನವಾಗಿ ರೂಪಿಸಿದರು. ದೂರದರ್ಶಿತ್ವವುಳ್ಳವರೂ, ದೀನದಲಿತರ ಬಗೆಗೆ ಕಳಕಳಿ ಹೊಂದಿದ್ದವರೂ ಆಗಿದ್ದರು. ಸಮಾಜದ ಎಲ್ಲಾ ವರ್ಗದವರಿಗೂ ಆಡಳಿತದಲ್ಲಿ ಅವಕಾಶ ಕಲ್ಪಿಸುವ ಸಲುವಾಗಿ ಶಿಫಾರಸ್ಸುಗಳನ್ನು ಪಡೆಯಲು ಮಿಲ್ಲರ್ ಆಯೋಗ ರಚಿಸಿದರು.

## ನಾಲ್ವಡಿ ಕೃಷ್ಣರಾಜ ಒಡೆಯರ ಪ್ರಮುಖ ಸಾಧನೆಗಳು

ನಾಲ್ವಡಿ ಕೃಷ್ಣರಾಜ ಒಡೆಯರ ಪ್ರಮುಖ ಸಾಧನೆಗಳು ಈ ಕೆಳಕಂಡಂತಿವೆ:

1. ಜೆ. ಎನ್. ಟಾಟಾ ಅವರು ಬೆಂಗಳೂರಿನಲ್ಲಿ ವಿಜ್ಞಾನ ಸಂಸ್ಥೆಯನ್ನು ಸ್ಥಾಪಿಸಲು 371 ಎಕರೆ ಭೂಮಿ ಹಾಗೂ ಐದು ಲಕ್ಷಕ್ಕೂ ಅಧಿಕ ಮೊತ್ತದ ಧನ ಸಹಾಯ ನೀಡಿದರು.
2. 1907 ರಲ್ಲಿ 'ನ್ಯಾಯ ವಿಧಾಯಕ ಸಭೆ' ಯನ್ನು ಸ್ಥಾಪಿಸಿ ಜನಪ್ರತಿನಿಧಿಗಳ ಮೂಲಕ ಜನರ ಸಮಸ್ಯೆಗಳನ್ನು ಚರ್ಚಿಸಲು ಅವಕಾಶ ಕಲ್ಪಿಸಿದರು.

3. ಇಂದಿನ ಮೈಸೂರು ಅರಮನೆಯನ್ನು 1910ರಲ್ಲಿ ಪೂರ್ಣಗೊಳಿಸಿದರು.
4. ಕೃಷ್ಣರಾಜಸಾಗರ (ಕೆ. ಆರ್. ಎಸ್) ಅಣೆಕಟ್ಟನ್ನು ನಿರ್ಮಾಣ ಮಾಡಿಸುವ ಮೂಲಕ ಸಂಸ್ಥಾನದಲ್ಲಿ ಕೃಷಿ ಅಭಿವೃದ್ಧಿಪಡಿಸಿದರು.
5. 1911 ರಲ್ಲಿ ಮೈಸೂರು ಸಂಪತ್ ಅಭ್ಯುದಯ ಪರಿಷತ್ತು (ದಿ ಮೈಸೂರು ಎಕನಾಮಿಕ್ ಕಾನ್ಫರೆನ್ಸ್) ಪ್ರಾರಂಭಿಸಿದರು.
6. ಹಿಂದುಳಿದ ವರ್ಗಗಳಿಗೆ ಸರ್ಕಾರಿ ಸೇವೆಯಲ್ಲಿ ವಿಶೇಷ ಪ್ರಾತಿನಿಧ್ಯ ನೀಡುವ ಆಜ್ಞೆ ಹೊರಡಿಸಿದರು.
7. ಮೊದಲ ಬಾರಿಗೆ ಸ್ತ್ರೀಯರಿಗೂ ಮತಾಧಿಕಾರ ನೀಡಲು ಅನುವು ಮಾಡಿದರು.

ಹೀಗೆ ನಾಲ್ವಡಿ ಅವರು ಶಿಕ್ಷಣ, ಕೈಗಾರಿಕೆ, ಬ್ಯಾಂಕ್ ಮೊದಲಾದ ಕ್ಷೇತ್ರಗಳಲ್ಲಿನ ಪ್ರಗತಿಗೆ ಮಾರ್ಗದರ್ಶಿಯಾಗಿ ಮತ್ತು ಪ್ರೇರಕ ಶಕ್ತಿಯಾಗಿ ನಿಂತರು. ಅವರ ದೂರದೃಷ್ಟಿಯ ಆಲೋಚನೆಗಳಿಗೆ ಕ್ರಿಯಾರೂಪವನ್ನು ಕೊಡುವ ಹಿನ್ನೆಲೆಯಲ್ಲಿ ರಾಜ್ಯದ ಪ್ರಗತಿಗೆ ನೆರವಾಗಬಲ್ಲ ಪ್ರತಿಭಾವಂತರನ್ನು ದಿವಾನರಾಗಿ ನೇಮಿಸಿಕೊಂಡರು. ಅವರಲ್ಲಿ ಸರ್. ಎಂ. ವಿಶ್ವೇಶ್ವರಯ್ಯ ಹಾಗೂ ಸರ್. ಮಿರ್ಜಾ ಇಸ್ಮಾಯಿಲ್ ಪ್ರಮುಖರು.

ನಾಲ್ವಡಿ ಅವರ ಮೈಸೂರು ಸಂಸ್ಥಾನವನ್ನು ಮಹಾತ್ಮ ಗಾಂಧೀಜಿ ಅವರು 'ರಾಮರಾಜ್ಯ'ವೆಂದು ಬಣ್ಣಿಸಿದರು. ನಾಲ್ವಡಿ ಅವರನ್ನು 'ರಾಜರ್ಷಿ' ಎಂದು ಕರೆದರು. 20 ನೇ ಶತಮಾನದ ಪೂರ್ವಾರ್ಧದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರಂತಹ ಮತ್ತೊಬ್ಬ ಪ್ರಬುದ್ಧ ಸಂಸ್ಥಾನಿಕ ರಾಜ ಭಾರತದಲ್ಲಿಯೇ ಇರಲಿಲ್ಲ.

ಮೈಸೂರು ಅರಮನೆಯನ್ನು ಹೊಸದಾಗಿ 1910 ರಲ್ಲಿ ಕಟ್ಟಲಾಯಿತು. ಇದಕ್ಕೂ ಮೊದಲಿದ್ದ ಮರದ ಅರಮನೆ ಅಗ್ನಿಗೆ ಆಹುತಿಯಾಗಿ ಭಸ್ಮಗೊಂಡಿತು. ಹೊಸ ಅರಮನೆಯ ನಿರ್ಮಾಣಕಾರ್ಯಕ್ಕೆ ದೇಶವಿದೇಶಗಳಿಂದ ಕುಶಲಕರ್ಮಿಗಳು ಬಂದಿದ್ದರು. ಅರಮನೆಯ ಸಭಾಂಗಣವನ್ನು (ದರ್ಬಾರ್ ಹಾಲ್) ಪ್ರಸಿದ್ಧ ಚಿತ್ರಕಲಾಕಾರ ರಾಜಾರವಿವರ್ಮ ಶೃಂಗರಿಸಿದರು. ಕೃಷ್ಣರಾಜ ಸಾಗರ (ಕೆ. ಆರ್. ಎಸ್.) ಅಣೆಕಟ್ಟನ್ನು ನಿರ್ಮಿಸುವಾಗ ನಾಲ್ವಡಿ ಕೃಷ್ಣರಾಜರಿಗೆ ಹಣಕಾಸಿನ ಸಮಸ್ಯೆ ಉಂಟಾಯಿತು. ಆಗ ರಾಜಪರಿವಾರದವರ ಚಿನ್ನಾಭರಣಗಳನ್ನು ಬಾಂಬೆಯ ಚಿನಿವಾರ ಪೇಟೆಯಲ್ಲಿ ಮಾರಾಟ ಮಾಡಿ, ಬಂದ ಹಣದಲ್ಲಿ ಅಣೆಕಟ್ಟಿನ ಕೆಲಸ ಕಾರ್ಯಗಳನ್ನು ಪೂರ್ಣಗೊಳಿಸಿದರು.



ಸರ್. ಎಂ. ವಿಶ್ವೇಶ್ವರಯ್ಯ (ಸಾ. ಶ. 1912-1918)



'ಆಧುನಿಕ ಮೈಸೂರಿನ ಶಿಲ್ಪಿ ಮತ್ತು ನಿರ್ಮಾತೃ' ಎಂದು ಪರಿಗಣಿಸಲ್ಪಟ್ಟವರು ಸರ್. ಎಂ. ವಿಶ್ವೇಶ್ವರಯ್ಯ. ಪ್ರತಿಭಾವಂತ ಇಂಜನಿಯರ್ ಆಗಿದ್ದ ಇವರು 1909-1912 ರ ವರೆಗೆ ಮೈಸೂರು ಸಂಸ್ಥಾನದ ಮುಖ್ಯ ಇಂಜನಿಯರ್ ಆಗಿ ಕಾರ್ಯನಿರ್ವಹಿಸಿದರು. ನಾಲ್ವಡಿ ಕೃಷ್ಣರಾಜ ಒಡೆಯರು ಇವರನ್ನು 1912 ರಲ್ಲಿ ಮೈಸೂರಿನ ದಿವಾನರನ್ನಾಗಿ ನೇಮಿಸಿಕೊಂಡರು. ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಮುನ್ನೋಟಕ್ಕೆ ಅನುಗುಣವಾಗಿ ಇವರ ಕಾಲದಲ್ಲಿ ಮೈಸೂರು ಸರ್ವತೋಮುಖ ಅಭಿವೃದ್ಧಿಯನ್ನು ಕಂಡಿತು.




ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

‘ಕೈಗಾರೀಕಿಕರಣ ಇಲ್ಲವೆ ವಿನಾಶ’ ಎಂಬುದು ಸರ್. ಎಂ. ವಿಶ್ವೇಶ್ವರಯ್ಯನವರ ಪ್ರಸಿದ್ಧ ಘೋಷಣೆಯಾಗಿತ್ತು. ಭದ್ರಾವತಿಯಲ್ಲಿನ ಕಬ್ಬಿಣದ ಕಾರ್ಖಾನೆ, ಮೈಸೂರಿನಲ್ಲಿ ಗಂಧದ ಎಣ್ಣೆ ಕಾರ್ಖಾನೆ, ಬೆಂಗಳೂರಿನಲ್ಲಿ ಸಾಬೂನು ಕಾರ್ಖಾನೆ, ಕೇಂದ್ರ ಕೈಗಾರಿಕಾ ಕಾರ್ಯಾಗಾರ, ಚರ್ಮ ಹದ ಮಾಡುವ ಕಾರ್ಖಾನೆ ಹಾಗೂ ಲೋಹದ ಕೈಗಾರಿಕೆಗಳನ್ನು ಆರಂಭಿಸಲಾಯಿತು. ವ್ಯಾಪಾರ ಹಾಗೂ ವಾಣಿಜ್ಯಕ್ಕೆ ಪ್ರೋತ್ಸಾಹ ನೀಡಲು ಬೆಂಗಳೂರಿನಲ್ಲಿ ಮೈಸೂರು ಛೇಂಬರ್ ಆಫ್ ಕಾಮರ್ಸ್ ಆಂಡ್ ಇಂಡಸ್ಟ್ರಿಯನ್ನು ಸ್ಥಾಪಿಸಲಾಯಿತು. ವ್ಯಾಪಾರ ಮತ್ತು ವಾಣಿಜ್ಯಗಳನ್ನು ಅಭಿವೃದ್ಧಿಪಡಿಸುವುದಕ್ಕಾಗಿ 1913 ರಲ್ಲಿ ಮೈಸೂರು ಬ್ಯಾಂಕನ್ನು ಸ್ಥಾಪಿಸಲಾಯಿತು. ಪ್ರತಿಯೊಂದು ದೇಶದ ಪ್ರಗತಿಯು ಮುಖ್ಯವಾಗಿ ಜನರ ಶಿಕ್ಷಣದ ಮೇಲೆ ಅವಲಂಬಿತವಾಗಿರುತ್ತದೆ ಎಂದು ಸರ್. ಎಂ. ವಿಶ್ವೇಶ್ವರಯ್ಯನವರು ಬಿದ್ದರು. ಇವರು ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿಗೊಳಿಸಿದರು. ತಾಂತ್ರಿಕ ಶಿಕ್ಷಣಕ್ಕೆ ಮಹತ್ವ ನೀಡಲಾಯಿತು. ಬೆಂಗಳೂರಿನ ಹೆಬ್ಬಾಳದಲ್ಲಿ ಕೃಷಿ ಶಾಲೆಯೊಂದನ್ನು ಸ್ಥಾಪಿಸಿದರು. 1916 ರಲ್ಲಿ ಸ್ಥಾಪಿಸಿದ ಮೈಸೂರು ವಿಶ್ವವಿದ್ಯಾಲಯ ಶೈಕ್ಷಣಿಕ ಕ್ಷೇತ್ರದಲ್ಲಿ ಇವರ ಅತ್ಯಂತ ಮಹತ್ತರ ಸಾಧನೆಯಾಗಿದೆ. 1915 ರಲ್ಲಿ ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತನ್ನು ಸ್ಥಾಪಿಸಲಾಯಿತು. ಕೃಷ್ಣರಾಜ ಸಾಗರ ಆಣೆಕಟ್ಟೆಯ ನಿರ್ಮಾಣ ಕಾರ್ಯ ವಿಶ್ವೇಶ್ವರಯ್ಯನವರ ಕಾಲದಲ್ಲಿ ಮುಂದುವರೆದು 1932ರ ಹೊತ್ತಿಗೆ ಪೂರ್ಣಗೊಂಡಿತು. ಮೈಸೂರು- ಅರಸೀಕೆರೆ ಮತ್ತು ಬೌರಿಂಗ್‌ಪೇಟೆ-ಕೋಲಾರ ರೈಲ್ವೆ ಮಾರ್ಗಗಳನ್ನು ಹಾಕಲಾಯಿತು. ನಾಲ್ವಡಿ ಕೃಷ್ಣರಾಜ ಒಡೆಯರ ಹಲವು ದೂರದರ್ಶಿತ್ವದ ಯೋಜನೆಗಳನ್ನು ಯಶಸ್ವಿಯಾಗಿ ಕಾರ್ಯರೂಪಕ್ಕಿಳಿಸಿದವರು ಸರ್. ಎಂ. ವಿಶ್ವೇಶ್ವರಯ್ಯನವರು. ಅಂತಿಮವಾಗಿ 1918 ರಲ್ಲಿ ವಿಶ್ವೇಶ್ವರಯ್ಯನವರು ದಿವಾನ ಪದವಿಗೆ ರಾಜೀನಾಮೆ ನೀಡಿದರು. ಬ್ರಿಟಿಷ್ ಸರಕಾರವು ಇವರ ಸೇವೆಗಾಗಿ ‘ಸರ್’ ಎಂಬ ಬಿರುದನ್ನು ನೀಡಿತು. 1955 ರಲ್ಲಿ ಭಾರತ ಸರ್ಕಾರವು ಇವರಿಗೆ ‘ಭಾರತ ರತ್ನ’ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ವಿಶ್ವೇಶ್ವರಯ್ಯನವರು ಈ ಪ್ರಶಸ್ತಿ ಪಡೆದ ಮೊದಲ ಕನ್ನಡಿಗರು ಎಂಬುದು ಹೆಮ್ಮೆಯ ವಿಚಾರ.





ಸರ್. ಮಿರ್ಜಾ ಇಸ್ಮಾಯಿಲ್ (ಸಾ. ಶ. 1926-1941)



ದಿವಾನರಾಗಿ ಸೇವೆಗೈದ ಸರ್. ಮಿರ್ಜಾ ಇಸ್ಮಾಯಿಲ್‌ರನ್ನು ಸಹ ಆಧುನಿಕ ಮೈಸೂರಿನ ನಿರ್ಮಾಪಕರಲ್ಲೊಬ್ಬರೆಂದು ಪರಿಗಣಿಸಲಾಗಿದೆ. ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಆಶಯದಂತೆ ಇವರು ಕೈಗಾರಿಕೆಗಳ ಅಭಿವೃದ್ಧಿಯನ್ನು ಪ್ರೋತ್ಸಾಹಿಸಿ ಹಲವಾರು ಕೈಗಾರಿಕೆಗಳನ್ನು ಆರಂಭಿಸಿದರು. ಬೆಂಗಳೂರಿನಲ್ಲಿ ಹಿಂದೂಸ್ತಾನ್ ಏರೋನಾಟಿಕ್ಸ್ ಲಿಮಿಟೆಡ್, ಗಾಜಿನ ಕಾರ್ಖಾನೆ, ಪಿಂಗಾಣಿ ಪಾತ್ರೆ ಕಾರ್ಖಾನೆ, ಬೆಳಗೊಳದಲ್ಲಿ ರಾಸಾಯನಿಕ ಗೊಬ್ಬರ ಕಾರ್ಖಾನೆ, ಮಂಡ್ಯದಲ್ಲಿ ಸಕ್ಕರೆ ಕಾರ್ಖಾನೆ, ಶಿವಮೊಗ್ಗದಲ್ಲಿ ಬೆಂಕಿಕಡ್ಡಿ ಕಾರ್ಖಾನೆ ಮತ್ತು ಭದ್ರಾವತಿಯಲ್ಲಿನ ಉಕ್ಕು ಹಾಗೂ ಕಾಗದ ಕಾರ್ಖಾನೆಗಳನ್ನು ಇವರು ಸ್ಥಾಪಿಸಿದರು. ಜಕ್ಕೂರಿನಲ್ಲಿ ವಿಮಾನ ನಿಲ್ದಾಣವನ್ನು ನಿರ್ಮಿಸಿದರು. ಆಕಾಶವಾಣಿ (ರೇಡಿಯೋ) ಕೇಂದ್ರಗಳನ್ನು ಬೆಂಗಳೂರು ಮತ್ತು ಮೈಸೂರುಗಳಲ್ಲಿ ಆರಂಭಿಸಿದರು. ಇವರು ಗ್ರಾಮೀಣ ಕೈಗಾರಿಕೆಗಳನ್ನು ಪ್ರೋತ್ಸಾಹಿಸಿದರು.

ಬದನವಾಳದಲ್ಲಿ ಖಾದಿ ಉತ್ಪಾದನೆಯ ಕೇಂದ್ರವನ್ನು ಸ್ಥಾಪಿಸಿದರು. ಇರ್ವಿನ್ ಕಾಲುವೆ ನಿರ್ಮಿಸಿ ಮಂಡ್ಯ ಜಿಲ್ಲೆಯ ಕೃಷಿ ಭೂಮಿಗೆ ನೀರನ್ನು ಒದಗಿಸಲಾಯಿತು. ಮೈಸೂರನ್ನು ಹೂ ತೋಟಗಳು ಮತ್ತು ಉದ್ಯಾನವನಗಳ ನಗರವನ್ನಾಗಿಸಿದರು. ಕೃಷ್ಣರಾಜ ಸಾಗರ ಜಲಾಶಯದ ಹಿಂಭಾಗದಲ್ಲಿ ಬೃಂದಾವನ ಉದ್ಯಾನವನವನ್ನು ನಿರ್ಮಿಸಿದರು.



ಬೆಂಗಳೂರಿನಲ್ಲಿ 'ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರರೋಗ ಶಸ್ತ್ರಚಿಕಿತ್ಸೆ ಸಂಸ್ಥೆ' (ನಿಮ್ಹಾನ್ಸ್), ಕೋಲಾರದಲ್ಲಿ ನರಸಿಂಹರಾಜ ಆಸ್ಪತ್ರೆ, ಶಿವಮೊಗ್ಗದಲ್ಲಿ ಮೆಗ್ಗಾನ್ ಆಸ್ಪತ್ರೆ ಮತ್ತು ಮೈಸೂರಿನಲ್ಲಿ ವಾಣಿವಿಲಾಸ ಆಸ್ಪತ್ರೆಗಳು ಇವರ ಕಾಲದಲ್ಲಿಯೇ ಆರಂಭವಾದವು.

ಶಿಕ್ಷಣದ ಪ್ರೋತ್ಸಾಹಕ್ಕಾಗಿ ಪ್ರಾಥಮಿಕ ಶಿಕ್ಷಣ ಕಾಯ್ದೆಯನ್ನು ಜಾರಿಗೊಳಿಸಿ, ಖಾಸಗಿ ಶಾಲೆಗಳಿಗೆ ಅನುದಾನವನ್ನು ನೀಡಲಾಯಿತು. ಪ್ರೌಢಶಾಲೆಗಳಲ್ಲಿ ಕನ್ನಡ ಮಾಧ್ಯಮದ ಶಿಕ್ಷಣವನ್ನು ಆರಂಭಿಸಲಾಯಿತು. ಹೀಗೆ ಮೈಸೂರನ್ನು ಅಭಿವೃದ್ಧಿಪಡಿಸುವಲ್ಲಿ ಮಿರ್ಜಾ ಇಸ್ಮಾಯಿಲ್‌ರು ಮಹತ್ವದ ಪಾತ್ರ ವಹಿಸಿದ್ದಾರೆ. ನಾಲ್ವಡಿ ಕೃಷ್ಣರಾಜ ಒಡೆಯರ ಸಹಪಾಠಿಗಳಾಗಿದ್ದ ಮಿರ್ಜಾ ಇಸ್ಮಾಯಿಲರು ನಾಲ್ವಡಿ ಅವರ ದೂರದರ್ಶಿತ್ವದ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಯಶಸ್ವಿಯಾದರು.

ನಾಲ್ವಡಿ ಕೃಷ್ಣರಾಜ ಒಡೆಯರ ಮರಣ ನಂತರ ಜಯಚಾಮರಾಜ ಒಡೆಯರು ಅಧಿಕಾರಕ್ಕೆ ಬಂದರು. ಇವರು ಮೈಸೂರನ್ನು ಆಳಿದ ಕೊನೆಯ ಅರಸರು.

ಭಾರತ ಸ್ವಾತಂತ್ರ್ಯ ಪಡೆದ ನಂತರ ಭಾರತ ಒಕ್ಕೂಟದಲ್ಲಿ ಮೈಸೂರು ಸಂಸ್ಥಾನ ಸೇರಬೇಕೆಂದು ಕೆ. ಸಿ. ರೆಡ್ಡಿ ಅವರ ನೇತೃತ್ವದಲ್ಲಿ ಅರಮನೆ ಸತ್ಯಾಗ್ರಹ ಆರಂಭವಾಯಿತು. ಈ ಸತ್ಯಾಗ್ರಹದ ಫಲವಾಗಿ ಜಯಚಾಮರಾಜ ಒಡೆಯರು ಭಾರತದ ಒಕ್ಕೂಟವನ್ನು ಸೇರಲು ಸಮ್ಮತಿಸಿದರು. ಪರಿಣಾಮವಾಗಿ ಕೆ. ಸಿ. ರೆಡ್ಡಿಯವರ ನೇತೃತ್ವದಲ್ಲಿ 1947 ಅಕ್ಟೋಬರ್ 24 ರಂದು ಜವಾಬ್ದಾರಿ ಸರ್ಕಾರ ಅಸ್ತಿತ್ವಕ್ಕೆ ಬಂದಿತು. ಜಯಚಾಮರಾಜ ಒಡೆಯರು ಮೈಸೂರು ರಾಜ್ಯದ ಮೊದಲ ರಾಜ್ಯಪಾಲರಾಗಿ ಕಾರ್ಯನಿರ್ವಹಿಸಿದರು. ಕೆ. ಸಿ. ರೆಡ್ಡಿಯವರು ಮೈಸೂರು ರಾಜ್ಯದ ಮೊದಲ ಮುಖ್ಯ ಮಂತ್ರಿಗಳಾಗಿ ಸೇವೆ ಸಲ್ಲಿಸಿದರು.

**ಕಾಲಗಣನೆ (ಸಾ. ಶ.)**

ಚಿಕ್ಕದೇವರಾಜ ಒಡೆಯರು 1673-1704
ಹೈದರ್ ಅಲಿ 1761-1782
ಟಿಪ್ಪು ಸುಲ್ತಾನ್ 1782-1799
ಒಂದನೆಯ ಆಂಗ್ಲೋ ಮೈಸೂರು ಯುದ್ಧ 1767- 1769
ಎರಡನೆಯ ಆಂಗ್ಲೋ ಮೈಸೂರು ಯುದ್ಧ 1780- 1784
ಮೂರನೆಯ ಆಂಗ್ಲೋ ಮೈಸೂರು ಯುದ್ಧ 1790- 1792
ನಾಲ್ಕನೆಯ ಆಂಗ್ಲೋ ಮೈಸೂರು ಯುದ್ಧ 1799
ಮಾರ್ಕ್ ಕಬ್ಬನ್ 1834-1861
ಲೂಯಿ ಬೆಂಥಾಮ್ ಬೌರಿಂಗ್ 1862-1870
ಹತ್ತನೆಯ ಚಾಮರಾಜ ಒಡೆಯರು 1881- 1894
ನಾಲ್ವಡಿ ಕೃಷ್ಣರಾಜ ಒಡೆಯರು 1902-1940
ಸರ್. ಎಂ. ವಿಶ್ವೇಶ್ವರಯ್ಯ 1912-1918
ಸರ್. ಮಿರ್ಜಾ ಇಸ್ಮಾಯಿಲ್ 1926-1941

## ಅಭ್ಯಾಸಗಳು

## I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.

1. ಮೈಸೂರು ಒಡೆಯರ ಆರಂಭಿಕ ರಾಜಧಾನಿ ________ ಆಗಿತ್ತು.
2. ಎರಡನೇ ಆಂಗ್ಲೋ ಮೈಸೂರು ಯುದ್ಧದ ನಂತರ ಬ್ರಿಟಿಷರು ಟಿಪ್ಪು ಸುಲ್ತಾನನೊಡನೆ ________ ಒಪ್ಪಂದ ಮಾಡಿಕೊಂಡರು.
3. 'ಮೈಸೂರು ಹುಲಿ' ಎಂದು ಪ್ರಸಿದ್ಧರಾದ ವ್ಯಕ್ತಿ ________.
4. ಮುಮ್ಮಡಿ ಕೃಷ್ಣರಾಜ ಒಡೆಯರ ದಿವಾನರು ________.
5. ಮೈಸೂರು ಸಂಸ್ಥಾನದಲ್ಲಿ ನ್ಯಾಯವಿಧಾಯಕ ಸಭೆಯು ________ ರಲ್ಲಿ ಆರಂಭವಾಯಿತು.
6. ಮೈಸೂರು ಸಂಸ್ಥಾನವನ್ನು ಗಾಂಧೀಜಿ ಅವರು ________ ಎಂದು ಬಣ್ಣಿಸಿದರು.
7. 'ಭಾರತ ರತ್ನ' ಪ್ರಶಸ್ತಿ ಪಡೆದ ಮೊದಲ ಕನ್ನಡಿಗ ________.
8. ಇರ್ವಿನ್ ಕಾಲುವೆಯನ್ನು ನಿರ್ಮಾಣ ಮಾಡಿಸಿದ ದಿವಾನರು ________.

## II. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.

1. ಅಠಾರ ಕಛೇರಿಯನ್ನು ಯಾರು ಸ್ಥಾಪಿಸಿದರು?
2. ದರಿಯಾ ದೌಲತ್ ಎಲ್ಲಿದೆ?
3. ಲಾಲ್‌ಬಾಗ್ ಉದ್ಯಾನವನ ಎಲ್ಲಿದೆ? ಅದನ್ನು ಆರಂಭಿಸಿದವರು ಯಾರು?
4. ಟಿಪ್ಪುವಿನ ಮರಣಾನಂತರ ಮೈಸೂರಿನ ಸಿಂಹಾಸನ ಯಾರಿಗೆ ಸೇರಿತು?
5. ಮೈಸೂರು ಸಂಸ್ಥಾನದಲ್ಲಿ ಕಮಿಷನರ್ ಆಡಳಿತ ಏಕೆ ಜಾರಿಗೆ ಬಂತು?
6. ಮೈಸೂರಿನ ಪ್ರಮುಖ ಕಮಿಷನರ್‌ಗಳನ್ನು ಹೆಸರಿಸಿ?
7. ಪುನರ್ದಾನ ಎಂದರೇನು?
8. ಪ್ರಜಾಪ್ರತಿನಿಧಿ ಸಭೆ ಯಾವಾಗ ಆರಂಭವಾಯಿತು?
9. ಕನ್ನಡ ಸಾಹಿತ್ಯ ಪರಿಷತ್ತು ಎಲ್ಲಿದೆ? ಇದು ಯಾವಾಗ ಸ್ಥಾಪನೆಯಾಯಿತು?
10. ಅರಮನೆ ಸತ್ಯಾಗ್ರಹದ ನೇತೃತ್ವ ವಹಿಸಿದ್ದವರು ಯಾರು?

## III. ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿ.

1. ಹೈದರಾಲಿಯ ಸಾಧನೆಗಳು ಯಾವುವು?
2. ಮೂರನೆಯ ಮೈಸೂರು ಯುದ್ಧದ ಪರಿಣಾಮವೇನು? ಅ ಕ್

3. ಟಿಪ್ಪು ಸುಲ್ತಾನನ ಸಾಧನೆಗಳು ಯಾವುವು?
4. ನಾಲ್ವಡಿ ಕೃಷ್ಣರಾಜ ಒಡೆಯರ ಪ್ರಮುಖ ಸಾಧನೆಗಳನ್ನು ಪಟ್ಟಿಮಾಡಿ.
5. ಸರ್ ಎಂ. ವಿಶ್ವೇಶ್ವರಯ್ಯನವರ ಸಾಧನೆಗಳು ಯಾವುವು?

**IV. ಈ ಕೆಳಗಿನ 'ಎ' ಪಟ್ಟಿಗೆ ಸಂಬಂಧಿಸಿದ 'ಬಿ' ಪಟ್ಟಿಯಲ್ಲಿನ ವಿಷಯಗಳನ್ನು ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| 1. ಚಿಕ್ಕದೇವರಾಜ ಒಡೆಯರ್ | a. ರಾಜರ್ಷಿ |
| 2. ಟಿಪ್ಪುಸುಲ್ತಾನ್ | b. ಭಾರತರತ್ನ |
| 3. ನಾಲ್ವಡಿ ಕೃಷ್ಣರಾಜ ಒಡೆಯರ್ | c. ನವಕೋಟಿ ನಾರಾಯಣ |
| 4. ಸರ್. ಎಂ. ವಿಶ್ವೇಶ್ವರಯ್ಯ | d. ಮೊದಲ ರಾಜ್ಯಪಾಲರು |
| 5. ಜಯಚಾಮರಾಜ ಒಡೆಯರ್ | e. ಮೈಸೂರುಹುಲಿ |

**ಚಟುಚಟಿಕೆಗಳು**

1. ಭೂಪಟದಲ್ಲಿ ಮೈಸೂರು ರಾಜ್ಯದ ಐತಿಹಾಸಿಕ ಸ್ಥಳಗಳನ್ನು ಗುರುತಿಸಿ.
2. ಟಿಪ್ಪು ಸುಲ್ತಾನ್ ಭಾರತದಲ್ಲಿ ಪರಕೀಯರ ಆಳ್ವಿಕೆಯಲ್ಲಿ ಕೊನೆಗೊಳಿಸಲು ಪ್ರಯತ್ನಿಸಿದರು. ಆದರೆ ಯಶಸ್ಸನ್ನು ಕಾಣಲಿಲ್ಲ ಏಕೆ? ಚರ್ಚಿಸಿ, ಉತ್ತರ ಬರೆಯಿರಿ.

## ಪಾಠದ ಪರಿಚಯ

11-12ನೇ ಶತಮಾನಗಳಲ್ಲಿ ಭಾರತದ ಮೇಲೆ ಟರ್ಕರು ಪದೇ ಪದೇ ಎಸಗುತ್ತಿದ್ದ ಸೈನಿಕ ಆಕ್ರಮಣಗಳು ಅಂತಿಮವಾಗಿ ದಿಲ್ಲಿಯ ಸುಲಾನರ ಆಳ್ವಿಕೆಗೆ (1206-1526) ಕಾರಣವಾದುವು. ಈ ಪಾಠದಲ್ಲಿ ದಿಲ್ಲಿಯ ಸುಲಾನರ ಆಡಳಿತ, ಅವರ ಕಾಲದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು ಮತ್ತು ವಾಸ್ತುಶಿಲ್ಪ, ಸಾಹಿತ್ಯಗಳಿಗೆ ಅವರು ನೀಡಿದ ಕೊಡುಗೆಯನ್ನು ನಿರೂಪಿಸಲಾಗಿದೆ.

## ಸಾಮರ್ಥ್ಯಗಳು

1. 11-12ನೇ ಶತಮಾನಗಳಲ್ಲಾದ ಐತಿಹಾಸಿಕ ಬೆಳವಣಿಗೆಗಳು ಅಂತಿಮವಾಗಿ ದಿಲ್ಲಿಯ ಸುಲಾನರ ಆಳ್ವಿಕೆಯ ಸ್ಥಾಪನೆಗೆ ಹೇಗೆ ದಾರಿಮಾಡಿಕೊಟ್ಟವು ಎಂಬುದನ್ನು ಅರ್ಥೈಸಿಕೊಳ್ಳುವುದು.
2. ಸುಲಾನರ ಆಡಳಿತವು ಭಾರತೀಯ ಸಮಾಜ, ಆರ್ಥಿಕತೆ ಮತ್ತು ಸಂಸ್ಕೃತಿಯ ಮೇಲೆ ಬೀರಿದ ಪ್ರಭಾವವನ್ನು ತಿಳಿದುಕೊಳ್ಳುವುದು.
3. ದಿಲ್ಲಿಯ ಸುಲ್ತಾನರ ಕಾಲದ ಐತಿಹಾಸಿಕ ಸ್ಥಳಗಳನ್ನು ಭೂಪಟದಲ್ಲಿ ಗುರುತಿಸುವುದು.

ನಮ್ಮ ದೇಶದ ಮೇಲೆ ಪ್ರಾಚೀನ ಕಾಲದಿಂದಲೂ ವಿದೇಶಿ ಆಕ್ರಮಣಗಳು ನಡೆದವು. ಆಕ್ರಮಣಕಾರರು ವಾಯವ್ಯ ಸರಹದ್ದಿನಿಂದ ಬಂದವರಾಗಿದ್ದರು. ಸಂಪತ್ತಿನ ಲೂಟಿ, ರಾಜ್ಯ ವಿಸ್ತರಣೆ ಮತ್ತು ಮತಪ್ರಸಾರ ಇವು ದಾಳಿಗಳ ಉದ್ದೇಶವಾಗಿದ್ದುವು.

ಅರಬ್ಬರ ದಾಳಿ: ಭಾರತದ ಮೇಲೆ ಆರಂಭಿಕ ಮಧ್ಯಕಾಲದಲ್ಲಿ ದಾಳಿ ಮಾಡಿದ ಮೊದಲಿಗರೆಂದರೆ ಅರಬ್ಬರು. ಅರಬ್ಬರ ದಂಡು ಇಂದಿಗೆ 1300 ವರ್ಷಗಳ ಹಿಂದೆ ಸಿಂಧ್ ಮತ್ತು ಮುಲ್ತಾನ್ ಪ್ರಾಂತಗಳನ್ನು ವಶಪಡಿಸಿಕೊಂಡಿತು. ಇದರೊಂದಿಗೆ ಈ ಪ್ರದೇಶದಲ್ಲಿ ಇಸ್ಲಾಂ ನೆಲೆಯೂರಿತು. ಆದರೆ ಅಲ್ಪಕಾಲದಲ್ಲಿ ಅರಬ್ಬರ ಅತಿಕ್ರಮಣವು ತಣ್ಣಗಾಯಿತು.

ಟರ್ಕರ ದಾಳಿ: ಇದಾದ ಸುಮಾರು ಮೂರು ಶತಮಾನಗಳ ಅನಂತರ ಟರ್ಕಿ ಮೂಲದ ಮಹಮದ್ ಘಜನಿ ಭಾರತದ ಮೇಲೆ ದಾಳಿ ನಡೆಸಿದನು. ಅಫ್ಘಾನಿಸ್ತಾನದ ಘಜನಿ ಎಂಬ ಚಿಕ್ಕ ರಾಜ್ಯದ ಸುಲಾನನಾಗಿದ್ದ ಇವನು ಹದಿನೇಳು ಬಾರಿ ದಾಳಿ ನಡೆಸಿದನು. ಇದರ ಪರಿಣಾಮವಾಗಿ ಭಾರತದ ಹಲವಾರು ಸಂಪದ್ಭರಿತ ನಗರಗಳು ಸೂರೆಗೊಂಡವು. ಧಾರ್ಮಿಕ ಕೇಂದ್ರಗಳು ನಾಶವಾದವು.





ಮಹಮದ್ ಘೋರಿ: ಇಂದಿಗೆ 8 ಶತಮಾನಗಳ ಹಿಂದೆ ಅಫ್‌ಘಾನಿಸ್ತಾನದ ಮಹಮದ್ ಘೋರಿ ಭಾರತದ ಮೇಲೆ ದಾಳಿ ನಡೆಸಿ ಸಿಂಧ್ ಮತ್ತು ಪಂಜಾಬ್ ಪ್ರಾಂತ್ಯಗಳನ್ನು ವಶಪಡಿಸಿಕೊಂಡನು. ದಾಳಿ ಮುಂದುವರಿಯುತ್ತಿದ್ದಂತೆ ದಿಲ್ಲಿಯ ರಾಜ ಪೃಥ್ವೀರಾಜ್ ಚೌಹಾಣನು ಘೋರಿಯನ್ನು ಮೊದಲ ತರೈನ್ ಯುದ್ಧದಲ್ಲಿ ಸೋಲಿಸಿದನು. ಆದರೆ, ಮರುವರ್ಷ ಮತ್ತೆ ದಂಡೆತ್ತಿ ಬಂದ ಘೋರಿಯು ಎರಡನೆಯ ತರೈನ್ ಯುದ್ಧದಲ್ಲಿ ಪೃಥ್ವಿರಾಜನನ್ನು ಸೋಲಿಸಿ ಕೊಂದನು. ದಿಲ್ಲಿಯು ಘೋರಿಯ ವಶವಾಯಿತು.

## ಗುಲಾಮಿ ಸಂತತಿ

ಘೋರಿಯು ಗೆದ್ದುಕೊಂಡ ಪ್ರದೇಶಗಳನ್ನು ತನ್ನ ಸೇನಾನಿ ಕುತ್ಬುದ್ದೀನ್ ಐಬಕ್ ಎಂಬವನಿಗೆ ಹಸ್ತಾಂತರಿಸಿದನು. ಘೋರಿಯ ಮರಣದ ನಂತರ ಕುತ್ಬುದ್ದೀನ್ ಐಬಕ್ ದಿಲ್ಲಿಯ ಸುಲ್ತಾನನಾಗಿ ಸ್ವತಂತ್ರ ಆಳ್ವಿಕೆ ಪ್ರಾರಂಭಿಸಿದನು. ದೆಹಲಿಯನ್ನು ಗುಲಾಮಿ, ಖಿಲ್ಜಿ, ತುಘಲಕ್, ಸೈಯದ್ ಮತ್ತು ಲೂದಿ ಎಂಬ 5 ಸಂತತಿಗಳು ಆಳಿದವು. ಅವುಗಳಲ್ಲಿ ಪ್ರಮುಖ ಸಂತತಿಗಳನ್ನು ಕುರಿತು ತಿಳಿಯೋಣ

## ಕುತ್ಬುದ್ದೀನ್ ಐಬಕ್:





ಕುತ್ಬುದ್ದೀನ್ ಪ್ರಾರಂಭದಲ್ಲಿ ಮಹಮದ್ ಘೋರಿಯ ಗುಲಾಮನಾಗಿದ್ದ. ಈ ಕಾರಣದಿಂದಾಗಿ ಇವನದು 'ಗುಲಾಮಿ' ಸಂತತಿ ಎಂದಾಯಿತು. ಇವನು ಶತ್ರುಗಳನ್ನು ಗೆದ್ದು, ಟರ್ಕರ ಆಳ್ವಿಕೆಯನ್ನು ಭದ್ರಗೊಳಿಸಿದನು. ತನ್ನ ವಿಜಯದ ದ್ಯೋತಕವಾಗಿ ದಿಲ್ಲಿಯ ಸಮೀಪದ ಮೆಹರೌಲಿ ಎಂಬಲ್ಲಿ ಕುತುಬ್ ಮಿನಾರಿನ ನಿರ್ಮಾಣಕಾರ್ಯ ಆರಂಭಿಸಿದನು. ಇಲ್ತುಮಶ್‌ನ ಕಾಲದಲ್ಲಿ ಇದು ಪೂರ್ಣಗೊಂಡಿತು. ದಿಲ್ಲಿಯ ಸುಲ್ತಾನರ ಕಾಲದಲ್ಲಿ ಅಧಿಕಾರ ಸೂತ್ರವನ್ನು ಹಿಡಿದ ಏಕೈಕ ಮಹಿಳೆಯೆಂದರೆ ರಜಿಯಾ ಸುಲ್ತಾನಾ. ಈ ಧೀರೆಯು ಆಸ್ಥಾನದಲ್ಲಿ ನ್ಯಾಯ ನೀಡುತ್ತಿದ್ದಳು. ಗಂಡುಡುಗೆ ತೊಟ್ಟು ರಣರಂಗಕ್ಕೆ ಧುಮುಕುತ್ತಿದ್ದಳು. ಆಸ್ಥಾನದ ಸರದಾರರು ಮಹಿಳೆಯೋರ್ವಳ ಆಳ್ವಿಕೆಯನ್ನು ಸಹಿಸದೆ ಅವಳನ್ನು ಕೊಂದರು.

## ಖಿಲ್ಜಿ ಸಂತತಿ

ಗುಲಾಮಿ ಸಂತತಿಯ ಅನಂತರ ಖಿಲ್ಜಿ ಸಂತತಿ ಅಧಿಕಾರಕ್ಕೇರಿತು. ಖಿಲ್ಜಿಗಳಲ್ಲಿ ಅಲ್ಲಾವುದ್ದೀನ್ ದಿಲ್ಲಿಯ ಸುಲ್ತಾನರಲ್ಲೇ ಬಲಶಾಲಿಯಾಗಿದ್ದನು. ಈತನದು ಸೈನಿಕ ಆಡಳಿತವಾಗಿತ್ತು.

ಅಲ್ಲಾವುದ್ದೀನ್ ಖಿಲ್ಜಿ: ಅಲ್ಲಾವುದ್ದೀನನು ಆಡಳಿತ, ಸೈನ್ಯ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಸುಧಾರಣೆಗಳನ್ನು ಜಾರಿಗೆ ತಂದನು. ಅಗತ್ಯವಸ್ತುಗಳ ಮಾರಾಟದ ಮೇಲೆ ಹತೋಟಿಯಲ್ಲಿಟ್ಟುಕೊಂಡನು. ಮಾದಕ ಪದಾರ್ಥ ಸೇವನೆ, ಜೂಜಾಟಗಳನ್ನು ನಿಷೇಧ ಮಾಡಿದನು. ತಪ್ಪಿತಸ್ಥರೆಂದು ಕಂಡವರನ್ನು ಕ್ರೂರವಾಗಿ ದಂಡಿಸಿದ.

ದಂಡ ಯಾತ್ರೆಗಳು: ಭಾರತ ದೇಶವನ್ನು ಪೂರ್ಣವಾಗಿ ಗೆದ್ದುಕೊಳ್ಳಬೇಕೆಂಬುದು ಅಲ್ಲಾವುದ್ದೀನನ ಆಕಾಂಕ್ಷೆಯಾಗಿತ್ತು. ಪ್ರಾರಂಭದಲ್ಲಿ ತನ್ನ ಸೈನಿಕ ಶಕ್ತಿಯಿಂದ ಉತ್ತರ ಭಾರತವನ್ನು ಗೆದ್ದುಕೊಂಡನು. ದಕ್ಷಿಣ ಭಾರತವನ್ನು ವಶಪಡಿಸಿಕೊಳ್ಳಲು ತನ್ನ ಆಪ್ತ ಗುಲಾಮನಾದ ಮಲ್ಲಿಕ್ ಕಾಫರ್ ಎಂಬ ಸೇನಾನಿಯನ್ನು ಭಾರಿ ಸೇನಾಪಡೆಯೊಂದಿಗೆ ಕಳುಹಿಸಿದನು. ಮಲ್ಲಿಕಾಫರ್ ದಕ್ಷಿಣ ಭಾರತದ ನಾಲ್ಕು ರಾಜ್ಯಗಳ ರಾಜಧಾನಿಗಳನ್ನು ಕೊಳ್ಳೆಹೊಡೆದನು.

ತದನಂತರ ಮಲ್ಲಿಕಾಫರನು ದಂಡಯಾತ್ರೆಯನ್ನು ರಾಮೇಶ್ವರದವರೆಗೆ ಮುಂದುವರಿಸಿದನು. ಅಲ್ಲಿಯೂ ದೇವಾಲಯಗಳನ್ನು ಲೂಟಿಮಾಡಿದನು, ಧನಕನಕಾದಿಗಳು ಭಾರಿ ಪ್ರಮಾಣದಲ್ಲಿ ಸೂರೆಗೊಂಡವು. ದಕ್ಷಿಣ ಭಾರತದಿಂದ ದಿಲ್ಲಿಗೆ ಇಷ್ಟೊಂದು ಪ್ರಮಾಣದಲ್ಲಿ ಸಂಪತ್ತಿನ ಹೊಳೆ ಹಿಂದೆಂದೂ ಹರಿದು ಹೋಗಿರಲಿಲ್ಲ.

ಅಲ್ಲಾವುದ್ದೀನನು ಅಮೀರ್ ಖುಸ್ರು, ಅಮೀರ್ ಹಸನ್ ಮುಂತಾದ ಪರ್ಷಿಯನ್ ಕವಿಗಳನ್ನು ಪ್ರೋತಾಹಿಸಿದ. ದಿಲ್ಲಿಯಲ್ಲಿ 'ಸಿರಿ' ಎಂಬ ರಾಜಧಾನಿಯನ್ನು ಕಟ್ಟಿಸಿದನು. ಅಲೈ ದರ್ವಾಜಾ ಇವನ ಭವ್ಯ ರಚನೆಯಾಗಿದೆ.



ಅಲ್ಲಾವುದ್ದೀನನ ಅಂತ್ಯಕಾಲ ದುಃಖಮಯವಾಗಿತ್ತು. ಅರಮನೆಯಲ್ಲಿ ದಂಗೆಗಳಾದವು. ಕೊನೆಗೆ ಅಲ್ಲಾವುದ್ದೀನನು ಕೊಲೆಗೀಡಾದನು. ಅಲ್ಪಕಾಲದಲ್ಲೇ ಖಿಲ್ಜಿ ಸುಲ್ತಾನರ ಆಳ್ವಿಕೆ ಕೊನೆಗೊಂಡು ತುಘಲಕ್ ಸಂತತಿ ಅಧಿಕಾರಕ್ಕೆ ಬಂದಿತು.

ಮಲ್ಲಿಕಾಫರ್ ಆಕ್ರಮಣ ಮಾಡಿದ ರಾಜ್ಯಗಳೆಂದರೆ: ಮಹಾರಾಷ್ಟ್ರದ ಯಾದವ (ರಾಜಧಾನಿ ದೇವಗಿರಿ), ಆಂಧ್ರದ ಕಾಕತೀಯ (ವಾರಂಗಲ್ಲು), ಕರ್ನಾಟಕದ ಹೊಯ್ಸಳ (ದ್ವಾರಸಮುದ್ರ) ಮತ್ತು ತಮಿಳುನಾಡಿನ ಪಾಂಡ್ಯ (ಮಧುರೆ).

**ತುಘಲಕರು**

ತುಘಲಕ್ ಸಂತತಿಯಲ್ಲಿ ಮಹಮದ್ ಬಿನ್ ತುಘಲಕ್ ಪ್ರಮುಖನು. ಅವನು ವಿದ್ವಾಂಸನಾಗಿದ್ದನು. ಆದರೆ ಆತುರ ಮತ್ತು ಕೋಪಿಷ್ಟ ಸ್ವಭಾವದವನು. ಅವನಿಗೆ ವ್ಯವಹಾರ ಕೌಶಲ ಕಡಿಮೆ.

ಮಹಮದ್ ಬಿನ್ ತುಘಲಕ್: ಆಡಳಿತ ಸುಧಾರಣೆಗಾಗಿ ಮಹಮದನು ಹಲವು ಪ್ರಯೋಗಗಳನ್ನು ನಡೆಸಿದನು. ಅವುಗಳಲ್ಲಿ ಮುಖ್ಯವಾದುದು ರಾಜಧಾನಿಯ ವರ್ಗಾವಣೆ. ದಿಲ್ಲಿಯ ಬದಲು ಭಾರತದ ಮಧ್ಯಭಾಗದಲ್ಲಿರುವ ದೇವಗಿರಿಯನ್ನು ರಾಜಧಾನಿಯನ್ನಾಗಿ ಮಾಡಿದರೆ ದಕ್ಷಿಣ ಭಾರತದ ಮೇಲೆ ನಿಯಂತ್ರಣ ಸಾಧಿಸಬಹುದು ಎಂಬುದು ಮಹಮದನ ನಂಬಿಕೆಯಾಗಿತ್ತು. ದಿಲ್ಲಿಯಿಂದ 700 ಮೈಲು ದೂರದಲ್ಲಿದ್ದ ದೇವಗಿರಿಗೆ ದೌಲತಾಬಾದ್ ಎಂದು ಹೆಸರಿಟ್ಟು, ದಿಲ್ಲಿಯ ಜನ ಅಲ್ಲಿಗೆ ಹೋಗಬೇಕೆಂದು ಕಟ್ಟಾಜ್ಞೆ ಹೊರಡಿಸಿದನು. ಆದರೆ ವಲಸೆ ಹೊರಟ ಜನ ಅನುಭವಿಸಿದ ಕಷ್ಟ-ನಷ್ಟ ಹೇಳತೀರದು. ಎಷ್ಟೋ ಜನ ದಾರಿಯಲ್ಲೇ ಮಡಿದರು. ತಾನು ಮಾಡಿದ್ದು ಪ್ರಮಾದವಾಯಿತೆಂದು ನಿಧಾನವಾಗಿ ಮನಗಂಡ ಅವನು ಜನರು ಮತ್ತೆ ದಿಲ್ಲಿಗೆ ಹಿಂದಿರುಗುವಂತೆ ಅಪ್ಪಣೆ ಮಾಡಿದನು. ಕೊನೆಗೆ ಬದುಕಿ ಉಳಿದು ದಿಲ್ಲಿಗೆ ಮರಳಿದವರು ಕೆಲವೇ ಮಂದಿ.

ಮಹಮದನ ಇನ್ನೊಂದು ಸುಧಾರಣೆಯೆಂದರೆ ಬೆಳ್ಳಿಯ ನಾಣ್ಯಗಳ ಬದಲು ಅಷ್ಟೇ ಮುಖಬೆಲೆಯ ತಾಮ್ರದ ಸಂಕೇತ ನಾಣ್ಯಗಳನ್ನು ಚಲಾವಣೆಗೆ ತಂದುದು. ಆದರೆ ತಾಮ್ರದ ನಾಣ್ಯಗಳನ್ನು ಟಂಕಿಸುವ ಅಧಿಕಾರ ಸರ್ಕಾರಕ್ಕೆ ಮಾತ್ರವೇ ಸೇರಿದ್ದು ಎಂಬ ರಾಜಾಜ್ಞೆಯನ್ನು ಅವನು ಹೊರಡಿಸಲಿಲ್ಲ. ಪರಿಣಾಮವಾಗಿ ಸಿಕ್ಕಸಿಕ್ಕವರೆಲ್ಲ ತಾಮ್ರದ ನಾಣ್ಯಗಳನ್ನು ತಯಾರಿಸಿದರು. ಇದರಿಂದ ನಾಣ್ಯಗಳು ಅಪಮೌಲ್ಯಗೊಂಡವು. ಕೊನೆಗೆ ತಾಮ್ರದ ನಾಣ್ಯಗಳನ್ನು ರದ್ದು ಪಡಿಸಿದನು. ತಾಮ್ರದ ನಾಣ್ಯಗಳನ್ನು ಪಡೆದು ಬೆಳ್ಳಿ ನಾಣ್ಯಗಳನ್ನು ವಿತರಿಸಿದನು. ಖಜಾನೆ ಬರಿದಾಯಿತು. ಒಟ್ಟಿನಲ್ಲಿ ಜನರಿಂದ ಸುಲ್ತಾನನೆ ಮೋಸ ಹೋದನು. ಈ ಪ್ರಯೋಗದಿಂದ ರಾಜ್ಯದ ಆರ್ಥಿಕ ಸ್ಥಿತಿ ಹದಗೆಟ್ಟಿತು.

ಮಹಮದನ ಆಡಳಿತದಿಂದ ಅತೃಪ್ತರಾದ ಪ್ರಜೆಗಳು ದಂಗೆ ಎದ್ದರು. ಸಿಂಧ್ ಪ್ರದೇಶದಲ್ಲಿ ದಂಗೆಕೋರರನ್ನು ದಮನ ಮಾಡುತ್ತಿದ್ದಾಗ, ತೀವ್ರ ಜ್ವರದಿಂದ ಮಹಮದ್ ತೀರಿಕೊಂಡನು.

ತುಘಲಕರ ಅನಂತರ ಸಯ್ಯದ್ ಮತ್ತು ಲೋದಿಗಳು ಅಲ್ಪಕಾಲ ದಿಲ್ಲಿಯಿಂದ ಆಳ್ವಿಕೆ ನಡೆಸಿದರು. ಲೋದಿ ಸಂತತಿಯ ಕೊನೆಯ ಸುಲಾನನಾದ ಇಬ್ರಾಹಿಂ ಲೂದಿಯನ್ನು ಮೊಗಲ್ ದೊರೆ ಬಾಬರ್ ಮೊದಲ ಪಾಣಿಪತ್ ಕದನದಲ್ಲಿ ಸೋಲಿಸಿದನು. ಆ ಮೂಲಕ ಬಾಬರ್ ಮೊಗಲ ಸಾಮ್ರಾಜ್ಯಕ್ಕೆ ಬುನಾದಿ ಹಾಕಿದನು.

## ದಿಲ್ಲಿ ಸುಲ್ತಾನರ ಕೊಡುಗೆಗಳು

ಆಡಳಿತ: ದಿಲ್ಲಿ ಸುಲಾನರ ರಾಜ್ಯದಲ್ಲಿ ಹಿಂದುಗಳು ಬಹುಸಂಖ್ಯಾತರಾಗಿದ್ದರೂ ಆಡಳಿತವು ಟರ್ಕಿಯ ಮೇದರಿಯಲ್ಲಿ ನಡೆಯುತ್ತಿತ್ತು. ಮಿಲಿಟರಿ ಶಕ್ತಿಯು ರಾಜ್ಯದ ಬೆನ್ನೆಲುಬಾಗಿತ್ತು. ಸುಲ್ತಾನರು

ನಿರಂಕುಶ ಪ್ರಭುಗಳಾಗಿದ್ದರು. ಬಲ್ಬನ್ ಎಂಬ ಸುಲ್ತಾನನು ತಾನು ದೇವರ ಪ್ರತಿನಿಧಿ, ದೇವರಿಗಲ್ಲದೆ ಇನ್ನಾರಿಗೂ ಹೊಣೆಗಾರನಲ್ಲ ಎಂಬುದಾಗಿ ಸಾರಿದ್ದನು. ದಿಲ್ಲಿಯ ಸುಲ್ತಾನರು ಸ್ಥಳಿಯ ರಾಜರ ಪ್ರಬಲ ಪ್ರತಿರೋಧವನ್ನು ಸತತವಾಗಿ ಎದುರಿಸಬೇಕಾಗಿತ್ತು.

ಆರ್ಥಿಕತೆ: ರೈತರ ಮೇಲಿನ ಭೂಕಂದಾಯದ ಹೊರೆ ವಿಪರೀತವಾಗಿತ್ತು. ಮಹಮದ್ ಬಿನ್ ತುಘಲಕನು ಕಂದಾಯವನ್ನು ಇನ್ನಷ್ಟು ಹೆಚ್ಚಿಸಿದನಲ್ಲದೆ, ಅದನ್ನು ಕಟ್ಟುನಿಟ್ಟಾಗಿ ವಸೂಲಿ ಮಾಡಿದನು. ಪರಿಣಾಮವಾಗಿ ರೈತರು ಎಲ್ಲೆಡೆ ದಂಗೆಯೆದ್ದರು. ನೇಯ್ಗೆಯು ಆ ಕಾಲದ ಬೃಹತ್ ಉದ್ಯಮವಾಗಿತ್ತು. ನಗರ ಪ್ರದೇಶಗಳಲ್ಲಿ ಕಟ್ಟಡ ನಿರ್ಮಾಣ ಕಾರ್ಯ ಬಿರುಸಾಗಿ ನಡೆಯುತ್ತಿತ್ತು. ಇದು ಭಾರಿ ಪ್ರಮಾಣದಲ್ಲಿ ಉದ್ಯೋಗ ಒದಗಿಸಿತು. ಸುಲ್ತಾನರು ಪ್ರಮುಖವಾಗಿ ಯುದ್ಧ ಕುದುರೆಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು.

ವಾಸ್ತು ಶಿಲ್ಪ ಮತ್ತು ಸಾಹಿತ್ಯ: ದಿಲ್ಲಿ ಸುಲಾನರ ಕಾಲದ ಪ್ರಮುಖ ವಾಸ್ತುಶಿಲ್ಪಗಳೆಂದರೆ- ಪ್ರಸಿದ್ಧವಾದ ಕುತುಬ್ ಮಿನಾರ್ (71 ಮಿಟರ್ ಎತ್ತರ), ಅಲೈ ದರ್ವಾಜಾ ಎಂಬ ಸುಂದರ ದ್ವಾರ, ಕವ್ವತ್‌ವುಲ್ ಇಸ್ಲಾಮ್ ಮಸೀದಿ ಮತ್ತು ಸಿರಿ ಕೋಟೆ. ಇದೇ ಕಾಲದಲ್ಲಿ ಉರ್ದು ಭಾಷೆ ರೂಪುಗೊಂಡಿತು. ಅಮೀರ್ ಖುಸ್ರು ಮತ್ತು ಅಮೀರ್ ಹಸನ್ ಪರ್ಷಿಯನ್ ಭಾಷೆಯ ಹೆಸರಾಂತ ಕವಿಗಳು. ಖುಸ್ರು ಸಂಗೀತಗಾರನಾಗಿದ್ದು ತಬಲಾ, ಸಿತಾರ್ ಮುಂತಾದ ವಾದ್ಯಗಳನ್ನು ರೂಪಿಸಿದನು. ಜೈಸಿ ಎಂಬ ಕವಿ ಉರ್ದುವಿನಲ್ಲಿ 'ಪದ್ಮಾವತ್' ಎಂಬ ಸೂಫಿ ಕಾವ್ಯ ಬರೆದನು. ರಾಮಾನಂದ, ಕಬೀರ, ರಾಯಿದಾಸ, ಮೀರಾ ಈ ಕಾಲದಲ್ಲಿದ್ದ ಭಕ್ತಿ ಸಂತರು.

**ಕಾಲಗಣನೆ (ಸಾ. ಶ.)**

ಸಿಂಧ್ ಪ್ರಾಂತದ ಮೇಲೆ ಅರಬ್ಬರ ದಾಳಿ– 712
ಮಹಮದ್ ಘಜನಿಯ ಆಕ್ರಮಣಗಳು- 1000-1026
ತರೈನ್ ಕದನಗಳು (ಮಹಮದ್ ಘೋರಿ ಮತ್ತು ಪೃಥ್ವೀರಾಜ್ ಚೌಹಾಣರ ನಡುವೆ- 1191-1192
ದಿಲ್ಲಿಯ ಸುಲಾನರ ಆಳಿಕೆ- 1206-1526
ಕುತ್ಬುದ್ದೀನ್ ಐಬಕ್- 1206-1210
ರಜಿಯಾ ಸುಲಾನಾ- 1236-1240
ಅಲ್ಲಾವುದ್ದೀನ್ ಖಿಲ್ಜಿ- 1296-1316
ಮಹಮದ್ ಬಿನ್ ತುಘಲಕ್- 1325-1351
ಪಾಣಿಪತ್ ಕದನ ಹಾಗೂ ಮೊಗಲ್ ಆಳ್ವಿಕೆಯ ಆರಂಭ- 1526

ಹೊಸ ಪದ: ಮಿನಾರು- ಎತ್ತರವಾದ ಸ್ತಂಭಗೋಪುರ.

## ಅಭ್ಯಾಸಗಳು

**I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.**

1. ಮೊದಲ ತರೈನ್ ಯುದ್ಧದಲ್ಲಿ ಪೃಥ್ವೀರಾಜ ಚೌಹಾಣನಿಂದ ________ ಸೋತನು.
2. ಅಲ್ಲಾವುದ್ದೀನ್ ಖಿಲ್ಜಿಯು ದಿಲ್ಲಿಯಲ್ಲಿ ________ ಎಂಬ ರಾಜಧಾನಿಯನ್ನು ಕಟ್ಟಿಸಿದನು.
3. ಇಬ್ರಾಹಿಂ ಲೂದಿಯನ್ನು ಮೊದಲ ಪಾಣಿಪತ್ ಕದನದಲ್ಲಿ ಸೋಲಿಸಿದವನು ________.

**II. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಮಹಮದ್ ಘೋರಿಯು ಎರಡನೇ ತರೈನ್ ಯುದ್ಧದಲ್ಲಿ ಯಾರ ವಿರುದ್ಧ ಜಯ ಸಾಧಿಸಿದನು?
2. ಕುತುಬ್ ಮಿನಾರನ್ನು ಕಟ್ಟಿಸಿದವರು ಯಾರು?
3. ದಿಲ್ಲಿ ಸುಲ್ತಾನರ ಕಾಲದಲ್ಲಿ ಆಳ್ವಿಕೆ ನಡೆಸಿದ ಏಕೈಕ ಮಹಿಳೆ ಯಾರು?
4. ದಕ್ಷಿಣ ಭಾರತದ ಮೇಲೆ ದಾಳಿ ನಡೆಸಿದ ಅಲ್ಲಾವುದ್ದೀನ್ ಖಿಲ್ಜಿಯ ದಂಡನಾಯಕ ಯಾರು?
5. ಮಹಮದ್ ಬಿನ್ ತುಘಲಕನು ರಾಜಧಾನಿಯನ್ನು ಎಲ್ಲಿಂದ ಎಲ್ಲಿಗೆ ವರ್ಗಾಯಿಸಿದನು?
6. ‘ತಾನು ದೇವರ ಪ್ರತಿನಿಧಿ’ ಎಂದು ಹೇಳಿಕೊಂಡ ದಿಲ್ಲಿ ಸುಲ್ತಾನ ಯಾರು?

**III. ಈ ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿ.**

1. ಮಹಮದ್ ಘಜನಿಯ ದಾಳಿಗಳ ಪರಿಣಾಮಗಳೇನು?
2. ದಿಲ್ಲಿಯ ಸುಲ್ತಾನ ಮನೆತನಗಳನ್ನು ಹೆಸರಿಸಿ.
3. ಕುತ್ಬುದ್ದೀನ್ ಐಬಕ್‌ನ ಸಾಧನೆಗಳನ್ನು ತಿಳಿಸಿ.
4. ಅಲ್ಲಾವುದ್ದೀನ್ ಖಿಲ್ಜಿಯ ಸುಧಾರಣೆಗಳನ್ನು ಪಟ್ಟಿ ಮಾಡಿ.
5. ಮಹಮದ್ ಬಿನ್ ತುಘಲಕನು ನಡೆಸಿದ ಪ್ರಯೋಗಗಳನ್ನು ವಿವರಿಸಿ.
6. ವಾಸ್ತುಶಿಲ್ಪ ಮತ್ತು ಸಾಹಿತ್ಯ ಕ್ಷೇತ್ರಗಳಿಗೆ ದಿಲ್ಲಿಯ ಸುಲ್ತಾನರು ನೀಡಿದ ಕೊಡುಗೆಗಳು ಯಾವುವು?

**IV. ಕೆಳಗಿನ ‘ಎ’ ಪಟ್ಟಿ ಮತ್ತು ‘ಬಿ’ ಪಟ್ಟಿಯಲ್ಲಿನ ವಿಷಯಗಳನ್ನು ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| 1. ಜೈಸಿ | a. ಅಲೈ ದರ್ವಾಜ |
| 2. ದೌಲತಾಬಾದ್ | b. ಸಿತಾರ್ |
| 3. ಅಲ್ಲಾವುದ್ದೀನ್ ಖಿಲ್ಜಿ | c. ಪದ್ಮಾವತ್ |
| 4. ಅಮೀರ್ ಖುಸ್ರು | d. ದೇವಗಿರಿ |

**ಚಟುವಟಿಕೆಗಳು**

1. ದಿಲ್ಲಿಯ ಸುಲ್ತಾನರ ಕಾಲದ ವಾಸ್ತುಶಿಲ್ಪಗಳ ಭಾವಚಿತ್ರಗಳನ್ನು ವಿವರಣೆಯೊಂದಿಗೆ ಸಂಗ್ರಹಿಸಿ.
2. ಭೂಪಟದಲ್ಲಿ ದಿಲ್ಲಿ ಸುಲ್ತಾನರ ಕಾಲದ ಐತಿಹಾಸಿಕ ಸ್ಥಳಗಳನ್ನು ಗುರುತಿಸಿ.

## ಪಾಠ-7: ಮೊಗಲರು

### ಪಾಠದ ಪರಿಚಯ

1526 ರಲ್ಲಿ ಬಾಬರ್ ಭಾರತದ ಮೇಲೆ ದಂಡೆತ್ತಿ ಬಂದು, ದಿಲ್ಲಿ ಸುಲ್ತಾನರ ಆಳ್ವಿಕೆಯನ್ನು ಕೊನೆಗೊಳಿಸಿ ಮೊಗಲ್ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಈ ಪಾಠದಲ್ಲಿ ಅಕ್ಬರ್ ಮತ್ತು ಔರಂಗಜೇಬನ ಆಳ್ವಿಕೆಯನ್ನು ಪರಿಚಯಿಸಲಾಗಿದೆ. ಇದರೊಂದಿಗೆ ಮೊಗಲರ ಆಡಳಿತ ಮತ್ತು ಸಾಂಸ್ಕೃತಿಕ ಕೊಡುಗೆಗಳನ್ನು ನಿರೂಪಿಸಲಾಗಿದೆ. ಕೊನೆಯಲ್ಲಿ ಸಾಮ್ರಾಜ್ಯದ ಅವನತಿಗೆ ಕಾರಣವಾದ ಅಂಶಗಳನ್ನು ಹೇಳಲಾಗಿದೆ. ಒಟ್ಟಿನಲ್ಲಿ ಇದು ಎರಡು ಶತಮಾನಗಳ ಕಾಲ ಪ್ರಮುಖ ರಾಜಕೀಯ ಶಕ್ತಿಯಾಗಿ ಮೆರೆದು ಸಾಹಿತ್ಯ, ಕಲೆಗಳಿಗೆ ವಿಶೇಷ ಕೊಡುಗೆ ನೀಡಿದ ಮೊಗಲ್ ಸಾಮ್ರಾಜ್ಯದ ಏಳು ಬೀಳಿನ ಚರಿತ್ರೆ ಇದಾಗಿದೆ.

### ಸಾಮರ್ಥ್ಯಗಳು

1. ಅಕ್ಬರನ ಉದಾರ ನೀತಿ ಮತ್ತು ಸಾಧನೆಗಳನ್ನು ಅರಿತುಕೊಳ್ಳುವುದು.
2. ಔರಂಗಜೇಬನ ಸಂಕುಚಿತ ಧೋರಣೆಗಳು ದೇಶದಲ್ಲಿ ದಂಗೆಗಳು ಮತ್ತು ಸಾಮ್ರಾಜ್ಯದ ಅವನತಿಗೆ ಹೇಗೆ ಕಾರಣವಾದವು ಎಂಬುದನ್ನು ಅರ್ಥಮಾಡಿಕೊಳ್ಳುವುದು.
3. ಸಾಹಿತ್ಯ ಮತ್ತು ಕಲೆಗಳನ್ನು ಮೊಗಲ್ ಸಾಮ್ರಾಟರು ಹೇಗೆ ಶ್ರೀಮಂತಗೊಳಿಸಿದರು ಎಂಬುದನ್ನು ಪ್ರಶಂಸೆ ಮಾಡುವುದು.
4. ಮೊಗಲರ ಕಾಲದ ಐತಿಹಾಸಿಕ ಸ್ಥಳಗಳನ್ನು ಭೂಪಟದಲ್ಲಿ ಗುರುತಿಸುವುದು.

ಭಾರತದ ಇತಿಹಾಸದಲ್ಲಿ ಮೂರು ಸಾಮ್ರಾಜ್ಯಗಳು ಪ್ರಸಿದ್ಧವಾದುವು. ಅವುಗಳಲ್ಲಿ ಒಂದು ಮೌರ್ಯ ಸಾಮ್ರಾಜ್ಯ ಮತ್ತೊಂದು ಗುಪ್ತ ಸಾಮ್ರಾಜ್ಯ. ಮೊಗದೊಂದು ಮೊಗಲ್ ಸಾಮ್ರಾಜ್ಯ. ಮೊಗಲ್ ರಾಜಮನೆತನದ ಸ್ಥಾಪಕ ಬಾಬರ್. ಆರಂಭದಲ್ಲಿ ಇವನು ಅಫ್ಘಾನಿಸ್ತಾನದ ಕಾಬೂಲ್ ಎಂಬ ಪುಟ್ಟ ಪ್ರದೇಶವನ್ನು ಆಳುತ್ತಿದ್ದ. ಸಂಪದ್ಭರಿತ ಭಾರತದ ಮೇಲೆ ಆಕ್ರಮಣ ಮಾಡಲು ಸಮಯ ಕಾಯುತ್ತಿದ್ದ.

ಬಾಬರ್: ದಿಲ್ಲಿಯ ಸುಲ್ತಾನರು ದುರ್ಬಲಗೊಳ್ಳುತ್ತಿದ್ದಂತೆ ಬಾಬರ್ ದಿಲ್ಲಿಯ ಇಬ್ರಾಹಿಂ ಲೂದಿಯ ಮೇಲೆ ದಂಡೆತ್ತಿ ಬಂದು ಅವನ ಆಳ್ವಿಕೆಯನ್ನು ಕೊನೆಗೊಳಿಸಿದನು. ನಂತರ ರಜಪೂತರು ಮತ್ತು ಅಫ್ಘನರನ್ನು ವೀರಯೋಧನಾಗಿದ್ದ ಬಾಬರ್ ತನ್ನ ಉತ್ತಮ ಶಸ್ತ್ರಾಸ್ತ್ರ ಬಲದಿಂದ ಎದುರಿಸಿ ಹಿಮ್ಮೆಟ್ಟಿಸಿದನು.

ಬಾಬರನು ದಿಲ್ಲಿ, ಆಗ್ರಾ ಮತ್ತು ಸುತ್ತಮುತ್ತಲಿನ ಪ್ರದೇಶಗಳನ್ನು ಮೂರು ಯುದ್ಧಗಳಲ್ಲಿ ವಶಪಡಿಸಿಕೊಂಡು ಸಾಮ್ರಾಜ್ಯವನ್ನು ಸ್ಥಾಪಿಸಿದನು. ಆದರೆ ಅಲ್ಪಕಾಲದಲ್ಲೇ ಬಾಬರ್ ನಿಧನನಾದನು. ನಂತರ ಅವನ ಮಗ ಹುಮಾಯೂನ್ ಪಟ್ಟವೇರಿದನು.

ಹುಮಾಯೂನ್: ಆರಂಭದಲ್ಲಿ ಹುಮಾಯೂನ್ ಶತ್ರುಗಳನ್ನು ಯುದ್ಧದಲ್ಲಿ ಸೋಲಿಸಿದನಾದರೂ ಅಫ್ಘನ್ ಸರದಾರನಾದ ಶೇರ್ ಷಾ ಸೂರಿಯಿಂದ ಪರಾಜಯಗೊಂಡನು. ರಾಜ್ಯವನ್ನು ಕಳೆದುಕೊಂಡನು ಪರ್ಷಿಯಕ್ಕೆ ಪಲಾಯನ ಮಾಡಿ ಅಲ್ಲಿ ಹದಿನೈದು ವರ್ಷಗಳ ಕಾಲವಿದ್ದನು. ಅಫ್ಘನರ ಆಳ್ವಿಕೆ ದುರ್ಬಲಗೊಳ್ಳುತ್ತಿದ್ದಂತೆ ಹುಮಾಯೂನ್ ಭಾರತದ ಮೇಲೆ ದಂಡೆತ್ತಿಬಂದು ದೆಹಲಿಯನ್ನು ವಶಪಡಿಸಿಕೊಂಡನು. ಆದರೆ ಅಲ್ಪಕಾಲದಲ್ಲೇ ಹುಮಾಯೂನ್ ತೀರಿಕೊಂಡನು.

**ಅಕ್ಬರ್**



ಹುಮಾಯೂನನ ಮಗನಾದ ಅಕ್ಬರ್ ಭಾರತದಲ್ಲಿ ಸಾಮ್ರಾಜ್ಯವನ್ನು ಕಟ್ಟುವ ಆಕಾಂಕ್ಷೆಯುಳ್ಳವನಾಗಿದ್ದನು. ಈ ನಿಟ್ಟಿನಲ್ಲಿ ಕಲಿತನಕ್ಕೆ ಹೆಸರಾಗಿದ್ದ ರಜಪೂತ ಅರಸರನ್ನು ತನ್ನ ಪಕ್ಷದತ್ತ ಒಲಿಸಿಕೊಳ್ಳಲು ಯತ್ನಿಸಿದನು. ಅವರಲ್ಲಿ ಕೆಲವರು ಅಕ್ಬರನ ಪಕ್ಷ ವಹಿಸಿದರು. ಆದರೆ ಮೇವಾಡದ ರಾಣಾ ಪ್ರತಾಪಸಿಂಹನು ಅಕ್ಬರನಿಗೆ ಮಣಿಯಲಿಲ್ಲ. ಅವನು ಸ್ವಾಭಿಮಾನಿಯೂ ಮಹಾಶೂರನೂ ಆಗಿದ್ದನು. ಮುಂದೆ ಇವರ ನಡುವೆ ಹಾಲ್ದಿಘಾಟ್ (ರಾಜಸ್ಥಾನ) ಎಂಬಲ್ಲಿ ಭೀಕರ ಕದನ ನಡೆಯಿತು. ಈ ಕದನದಲ್ಲಿ ರಾಣಾ ಪ್ರತಾಪಸಿಂಹನು ಸೋತನಾದರೂ ಕೊನೆಯವರೆಗೂ ಅಕ್ಬರನಿಗೆ ಶಿರಬಾಗಲಿಲ್ಲ.

ಮುಂದೆ ಅಕ್ಬರ್ ಅನೇಕ ಸೈನಿಕ ಕಾರ್ಯಾಚರಣೆಗಳನ್ನು ಕೈಗೊಂಡನು. ಪರಿಣಾಮವಾಗಿ ಗುಜರಾತ್, ಬಂಗಾಳ, ಕಾಶ್ಮೀರ, ಕಾಬೂಲ್ ಮುಂತಾದ ಪ್ರದೇಶಗಳನ್ನು ಗೆದ್ದು ಬೃಹತ್ ಸಾಮ್ರಾಜ್ಯವನ್ನು ಸ್ಥಾಪಿಸಿದನು.

**ಅಕ್ಬರನ ಸಾಧನೆಗಳು**

ಆಡಳಿತ: ಉತ್ತಮ ಆಡಳಿತಗಾರನಾಗಿದ್ದ ಅಕ್ಬರ್ ವಿಶಾಲ ಮನೋಭಾವವನ್ನು ಹೊಂದಿದ್ದನು. ಉತ್ತಮ ರಾಜನಲ್ಲಿರಬೇಕಾದ ಬಹುತೇಕ ಗುಣಗಳು ಅವನಲ್ಲಿದ್ದವು. ಅವನು ನಿರಂಕುಶ ಪ್ರಭುವಾಗಿರಲಿಲ್ಲ. ಬಹುಸಂಖ್ಯಾತರಾದ ತನ್ನ ಹಿಂದು ಪ್ರಜೆಗಳ ವಿಶ್ವಾಸಗಳಿಸುವುದು ಅವಶ್ಯವೆಂದು ಮನಗಂಡನು. ಹಿಂದೂಗಳಿಗೆ ತನ್ನ ಆಸ್ಥಾನದಲ್ಲಿ ಉನ್ನತ ಹುದ್ದೆಗಳನ್ನು ನೀಡಿದನು. ಹಿಂದಿನ ಸುಲ್ತಾನರು ಹಿಂದೂಗಳ ಮೇಲೆ ವಿಧಿಸಿದ್ದ 'ಜೆಸಿಯಾ' (ಜಿಜಿಯಾ) ಎಂಬ ತಲೆಗಂದಾಯ ಹಾಗೂ ಯಾತ್ರಾ ತೆರಿಗೆಯನ್ನು ರದ್ದುಪಡಿಸಿದನು. ಅಕ್ಬರನು ಸತಿ ಪದ್ಧತಿಯನ್ನು ನಿಷೇಧಿಸಿದನು. ಬಾಲ್ಯ ವಿವಾಹವನ್ನು ವಿರೋಧಿಸಿದನು. ಅಕ್ಬರನ ಭೂಕಂದಾಯ ಪದ್ಧತಿ ಜನಮನ್ನಣೆಯನ್ನು ಗಳಿಸಿತು. ಭೂಕಂದಾಯ ಪದ್ಧತಿಯನ್ನು ರೂಪಿಸಿದವನು ಮಂತ್ರಿಯಾಗಿದ್ದ ರಾಜಾ ತೋದರ್ಮಲ್.

ಧಾರ್ಮಿಕ ನೀತಿ: ಅಕ್ಬರನು ಧಾರ್ಮಿಕ ಸಹಿಷ್ಣುವಾಗಿದ್ದನು. ತನ್ನ ಹೊಸ ರಾಜಧಾನಿಯಾದ ಫತೇಪುರ್ ಸಿಕ್ರಿಯಲ್ಲಿ 'ಇಬಾದತ್ ಖಾನಾ' ಎಂಬ ಪ್ರಾರ್ಥನಾ ಮಂದಿರ ಕಟ್ಟಿಸಿದನು. ಇಲ್ಲಿ ಇಸ್ಲಾಂ, ಹಿಂದೂ, ಜೈನ, ಬೌದ್ಧ, ಪಾರ್ಸಿ, ಕ್ರಿಶ್ಚಿಯನ್ ಮುಂತಾದ ಧಾರ್ಮಿಕ ಮುಖಂಡರನ್ನೂ ಆಹ್ವಾನಿಸಿ ಧಾರ್ಮಿಕ ಚರ್ಚೆಗಳನ್ನು ನಡೆಸುತ್ತಿದ್ದನು. ಈ ಚಿಂತನೆಗಳ ಫಲವಾಗಿ ಅಕ್ಬರ್ 'ದೀನ್-ಇ-ಇಲಾಹಿ' ಎಂಬ ತನ್ನದೇ ಆದ ಹೊಸ ಪಂಥವನ್ನು ಸ್ಥಾಪಿಸಿದನು. ಅದು ಎಲ್ಲ ಮತಧರ್ಮಗಳ ಉತ್ತಮ ಅಂಶಗಳನ್ನು ಒಳಗೊಂಡಿತ್ತು. ಆದರೆ ಕೇವಲ ಬೆರಳೆಣಿಕೆಯಷ್ಟು ಮಂದಿ ಮಾತ್ರವೇ ಅದರ ಅನುಯಾಯಿಗಳಾಗಿದ್ದರು.

ಕಲಾಪೋಷಣೆ: ಅಕ್ಬರ್ ಸಾಹಿತ್ಯ ಕಲೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿದನು. ಫೈಜಿ, ಅಬುಲ್ ಫಜಲ್ ಮತ್ತು ಬೀರಬಲ್ ಈತನ ಆಸ್ಥಾನದಲ್ಲಿದ್ದ ಗಣ್ಯ ಕವಿಗಳು. ಅಮರ ಸಂಗೀತಗಾರ ತಾನ್‌ಸೇನ್ ಅವನ ಆಸ್ಥಾನದ ಶೋಭೆಯನ್ನು ಹೆಚ್ಚಿಸಿದನು. ವಾಸ್ತುಶಿಲ್ಪ ಮತ್ತು ಚಿತ್ರಕಲೆಗಳಿಗೆ ಅಕ್ಬರ್ ನೀಡಿರುವ ಪ್ರೋತ್ಸಾಹ ಮೆಚ್ಚುವಂಥದ್ದು.

ಅಕ್ಬರನ ನಂತರ ಪಟ್ಟಕ್ಕೆ ಬಂದ ಜಹಾಂಗೀರ್ ಮತ್ತು ಷಹಜಹಾನ್ ಇಬ್ಬರೂ ಅಕ್ಬರನ ನೀತಿಯನ್ನು ಬಹುಮಟ್ಟಿಗೆ ಅನುಸರಿಸಿದರು. ಷಹಜಹಾನ್ ಆಗ್ರಾದಲ್ಲಿ ವಿಶ್ವಪ್ರಸಿದ್ಧ ತಾಜ್‌ಮಹಲ್, ದಿಲ್ಲಿಯಲ್ಲಿ ಬೃಹತ್ ಕೆಂಪುಕೋಟೆ ಮತ್ತು ಭವ್ಯ ಅರಮನೆಗಳನ್ನು ನಿರ್ಮಾಣ ಮಾಡಿಸಿ ಪ್ರಸಿದ್ಧಿ ಪಡೆದನು.

**ಔರಂಗಜೇಬ**



ಷಹಜಹಾನನ ಮಗ ಔರಂಗಜೇಬ್ ಕೊನೆಯ ಪ್ರಸಿದ್ಧ ಮೊಗಲ ಸಾಮ್ರಾಟ. ಇವನು ಐವತ್ತು ವರ್ಷಗಳ ಕಾಲ ಸುದೀರ್ಘ ಆಳ್ವಿಕೆ ನಡೆಸಿದನು. ಸಾಮ್ರಾಜ್ಯವು ಇನ್ನಷ್ಟು ವಿಸ್ತಾರಗೊಂಡಿತು. ಆದರೆ ಕೊನೆಯಲ್ಲಿ ಅದು ಶೀಘ್ರಗತಿಯಲ್ಲಿ ಅವನತಿ ಕಂಡಿತು.

ಧಾರ್ಮಿಕ ನೀತಿ: ಔರಂಗಜೇಬನು ಸಂಪ್ರದಾಯವಾದಿ ಮುಸಲ್ಮಾನನಾಗಿದ್ದನು. ಮದ್ಯಪಾನ, ಜೂಜು, ಮೋಜು ಮತ್ತು ಸಂಗೀತಗಳಿಂದ ದೂರವಾಗಿದ್ದನು. ಈತನು ಸರಳ ಜೀವಿಯಾಗಿದ್ದನು.

ಔರಂಗಜೇಬನು ಅಕ್ಬರನ ಉದಾರನೀತಿಯನ್ನು ಕೈಬಿಟ್ಟನು. ಜೆಸಿಯಾ ತೆರಿಗೆಯನ್ನು ಮತ್ತೆ ಹೇರಿದನು. ಇದು ರಾಜಕೀಯ ಘರ್ಷಣೆಗಳಿಗೆ ಎಡೆಮಾಡಿಕೊಟ್ಟಿತು.

ದಂಗೆಗಳು: ಉತ್ತರ ಭಾರತದಲ್ಲಿ ಸಿಖ್ಖರು ಮತ್ತು ರಜಪೂತರು ಔರಂಗಜೇಬನನ್ನು ಪ್ರಬಲವಾಗಿ ಪ್ರತಿಭಟಿಸಿದರು. ದಖನ್‌ದಲ್ಲಿ ಶಿವಾಜಿ ಬಂಡಾಯ ಎದ್ದನು. ದಂಗೆಗಳು ದೀರ್ಘಕಾಲ ನಡೆದು ಔರಂಗಜೇಬನು ಭಾರಿ ಸಂಪತ್ತು, ಸೈನಿಕರು ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ತನ್ನ ಪ್ರತಿಷ್ಠೆಯನ್ನು ಕಳೆದುಕೊಂಡನು. ಸಾಮ್ರಾಜ್ಯದ ಹಲವಾರು ಪ್ರದೇಶಗಳು ಸ್ವತಂತ್ರಗೊಂಡವು. ದಖನ್ನಿನ ಯುದ್ಧಗಳಿಂದ ಆರ್ಥಿಕವಾಗಿ ಹಾಗೂ ದೈಹಿಕವಾಗಿ ಬಹಳಷ್ಟು ಬಳಲಿದ ಔರಂಗಜೇಬನು ದಖನ್‌ನಲ್ಲಿ ಮರಣ ಹೊಂದಿದನು. ಇದರೊಂದಿಗೆ ಮೊಗಲರ ಪ್ರಾಬಲ್ಯವು ತೀವ್ರವಾಗಿ ಕುಂದಿತು.

ಸಿಖ್ಖರ ದಂಗೆ: ಔರಂಗಜೇಬನ ಮತೀಯ ಧೋರಣೆಯು ಸಿಖ್ಖರು, ಮರಾಠರು ಮತ್ತು ಜಾಟರನ್ನು ಕೆರಳಿಸಿತು. ಸಿಖ್ ಗುರು ತೇಜ್ ಬಹಾದೂರ್‌ರನ್ನು ದಿಲ್ಲಿಯಲ್ಲಿ ಬಹಿರಂಗವಾಗಿ ಕೊಲ್ಲಲಾಯಿತು. ಅವನ ಮಗ ಗುರು ಗೋವಿಂದಸಿಂಹನು ಇಡಿ ಸಿಖ್ ಸಮುದಾಯಕ್ಕೆ ವೀರದೀಕ್ಷೆ ನೀಡಿದನು. ದೀಕ್ಷೆ ಪಡೆದವರಿಗೆ ಸಿಂಗ್ (ಸಿಂಹ) ಎಂಬ ನಾಮಾಂಕಿತ ನೀಡಲಾಯಿತು. ಅವರು ಪಂಚ 'ಕ' ಕಾರಗಳನ್ನು, ಅಂದರೆ ಕೇಶ (ಉದ್ದ ಕೂದಲು), ಕಂಗಾ (ಬಾಚಣಿಗೆ), ಕೃಪಾಣ (ಕಿರುಗತ್ತಿ), ಕಚ್ಚೆ (ತುಂಡು ಇಜಾರು) ಮತ್ತು ಕಂಕಣ (ಕಬ್ಬಿಣದ ಬಳೆ) ಧರಿಸಬೇಕಿತ್ತು. ಈ ಆಚರಣೆ ಸಿಖ್ಖರಲ್ಲಿ ಇಂದಿಗೂ ಜೀವಂತವಾಗಿದೆ.

**ಸಾಂಸ್ಕೃತಿಕ ಕೊಡುಗೆಗಳು**

ಮೊಗಲರ ಆಡಳಿತ: ಮೊಗಲ್ ಸಾಮ್ರಾಟನೇ ಎಲ್ಲ ನಾಗರಿಕ ಮತ್ತು ಸೈನಿಕ ಅಧಿಕಾರ ಹೊಂದಿದ್ದನು. ನ್ಯಾಯ ನೀಡಿಕೆಯಲ್ಲಿ ಈತನದು ಅಂತಿಮ ನಿರ್ಣಯವಾಗಿತ್ತು. ಸಾಮ್ರಾಜ್ಯವನ್ನು ಪ್ರಾಂತ (ಸುಭಾ), ಜಿಲ್ಲೆ (ಸರ್ಕಾರ್) ಮತ್ತು ತಾಲ್ಲೂಕುಗಳಾಗಿ (ಪರಗಣ) ವಿಂಗಡಿಸಲಾಗಿತ್ತು. ನಗರಗಳಲ್ಲಿ ಕೊತ್ವಾಲ ಎಂಬ ಅಧಿಕಾರಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುತ್ತಿದ್ದನು.

ಕಂದಾಯ ವ್ಯವಸ್ಥೆ: ಅಕ್ಬರನ ಮಂತ್ರಿ ರಾಜಾ ತೋದರ್‌ಮಲ್ ಭೂಕಂದಾಯ ಪದ್ಧತಿಯನ್ನು ರೂಪಿಸಿದನು. ಭೂಮಿಯ ಫಲವತ್ತತೆಯ ಆಧಾರದಲ್ಲಿ ಕಂದಾಯವನ್ನು ನಿಗದಿ ಮಾಡಲಾಗಿತ್ತು.

ಸಾಹಿತ್ಯ: ಮೊಗಲರು ಪರ್ಷಿಯನ್ ಸಾಹಿತ್ಯಕ್ಕೆ ವಿಶೇಷ ಪ್ರೋತ್ಸಾಹ ನೀಡಿದರು. ಅಕ್ಬರನ ಆಸ್ಥಾನದಲ್ಲಿ ಅಬುಲ್ ಫಜಲ್, ನಿಜಾಮುದ್ದೀನ್ ಮತ್ತು ಬದೌನಿ ಎಂಬವರು ಪ್ರಸಿದ್ಧ ಇತಿಹಾಸಕಾರರಾಗಿದ್ದರು. 'ಅಕ್ಬರ್ ನಾಮಾ' ಅಬುಲ್ ಫಜಲನ ಪ್ರಮುಖ ಕೃತಿ. ಮೊಗಲ್ ರಾಜಕುಮಾರ 'ದಾರಾ ಷುಕೋ' ಶ್ರೇಷ್ಠ ವಿದ್ವಾಂಸನಾಗಿದ್ದು, ಭಗವದ್ಗೀತೆಯನ್ನು ಭಾಷಾಂತರ ಮಾಡಿದನು. ಹಿಂದಿ ಸಾಹಿತ್ಯವು ರಾಜಾಶ್ರಯ ಪಡೆಯದಿದ್ದರೂ ಸಂತರ

ಯತ್ನದಿಂದ ಶ್ರೀಮಂತಗೊಂಡಿತು. ‘ರಾಮಚರಿತಮಾನಸ’ ಎಂಬ ತುಲಸೀದಾಸನ ಪ್ರಸಿದ್ಧ ಕೃತಿ ಇದೇ ಕಾಲದಲ್ಲಿ ರಚನೆಯಾಯಿತು.



ವಾಸ್ತುಶಿಲ್ಪ: ದಿಲ್ಲಿಯಲ್ಲಿರುವ ಹುಮಾಯೂನನ ಸಮಾಧಿಯು ಅಕ್ಬರನ ಆರಂಭ ಕಾಲದ ನಿರ್ಮಾಣವಾಗಿದೆ. ಅವನು ಫತೇಪುರ ಸಿಕ್ರಿಯಲ್ಲಿ (ಆಗ್ರಾದ ಸಮೀಪ) ನೂತನ ರಾಜಧಾನಿಯನ್ನು ಕಟ್ಟಿಸಿದನು. ರಾಜಧಾನಿಯ ಭವ್ಯವಾದ ಅರಮನೆ, ಮಸೀದಿ ಮತ್ತು ಮಂಟಪಗಳು ದೇಶವಿದೇಶಗಳ ಪ್ರವಾಸಿಗರನ್ನು ಆಕರ್ಷಿಸುತ್ತಿವೆ. ಇಲ್ಲಿಯ ಜಾಮೀ ಮಸೀದಿಯ ಪ್ರವೇಶ ದ್ವಾರ (ಬುಲುಂದ್ ದರ್ವಾಜಾ) ಭಾರತದಲ್ಲಿಯೇ ಅತ್ಯುನ್ನತವಾಗಿದೆ.

ಮೊಗಲರ ವಾಸ್ತುಶಿಲ್ಪವು ತನ್ನ ಉಚ್ಛ್ರಾಯ ಸ್ಥಿತಿಯನ್ನು ಕಂಡದ್ದು ಷಹಜಹಾನನ ಕಾಲದಲ್ಲಿ. ಈತನು ಆಗ್ರಾ ಕೋಟೆಯೊಳಗೆ ಕಟ್ಟಿಸಿದ ಅರಮನೆ, ಮೋತಿ ಮಹಲ್ ಅಮೋಘವಾಗಿವೆ. ಆಗ್ರಾದಲ್ಲಿ ನಿರ್ಮಿಸಿದ ತಾಜ್‌ಮಹಲ್ ಮೊಗಲ್ ವಾಸ್ತುಶಿಲ್ಪಕ್ಕೆ ಕಳಸಪ್ರಾಯವಾಗಿದೆ. ಅವನ ರಾಣಿ ಮಮ್ತಾಜ್ ಮಹಲ್‌ಳ ನೆನಪಿಗಾಗಿ ಈ ಜಗತ್ಪ್ರಸಿದ್ಧ ಕಲಾಕೃತಿಯ ನಿರ್ಮಾಣವಾಯಿತು (17 ನೇ ಶತಮಾನ). ಈ ಸಮಾಧಿ ಮಂದಿರದಲ್ಲಿ ಷಹಜಹಾನ್ ಮತ್ತು ಮಮ್ತಾಜಳ ಗೋರಿಗಳಿವೆ. ದಿಲ್ಲಿಯ ಪ್ರಸಿದ್ಧ ಕೆಂಪು ಕೋಟೆಯನ್ನು ಕೂಡ ಷಹಜಹಾನನು ಕಟ್ಟಿಸಿದನು.





ಚಿತ್ರಕಲೆ: ಮೊಗಲರ ಕಾಲದಲ್ಲಿ ನೂತನ ಚಿತ್ರಕಲಾ ಸಂಪ್ರದಾಯವೊಂದು ಹುಟ್ಟಿಕೊಂಡಿತು. ಇದನ್ನು ಚಿಕಣಿ ಎಂದು ಕರೆಯಲಾಗಿದೆ. ಅಕ್ಬರನ ಆಸ್ಥಾನದಲ್ಲಿ ನೂರಕ್ಕೂ ಹೆಚ್ಚು ಚಿತ್ರಕಾರರಿದ್ದರು. ಚಿತ್ರಕಲೆಯು ಜಹಾಂಗೀರನ ಆಶ್ರಯದಲ್ಲಿ ಪರಿಪಕ್ವಗೊಂಡಿತು. ಸಂಪ್ರದಾಯವಾದಿಯಾಗಿದ್ದ ಔರಂಗಜೇಬನು ಚಿತ್ರಕಲೆಗೆ ಪ್ರೋತ್ಸಾಹ ನೀಡಲಿಲ್ಲ.

ಸಂಗೀತ: ಅಕ್ಬರನ ಕಾಲದಲ್ಲಿ ಸಂಗೀತ ಕಲೆಗೆ ಪ್ರೋತ್ಸಾಹ ನೀಡಲಾಗಿತ್ತು. ಆಸ್ಥಾನದ ಸಂಗೀತಗಾರರನ್ನು ಏಳು ತಂಡಗಳಾಗಿ ವಿಂಗಡಿಸಲಾಗಿತ್ತು. ವಾರದಲ್ಲಿ ದಿನಕ್ಕೊಂದು ತಂಡದಂತೆ ಸಂಗೀತ ಕಚೇರಿಯನ್ನು ನಡೆಸಲಾಗುತ್ತಿತ್ತು. ತಾನ್‌ಸೇನನು ಅಕ್ಬರನ ಆಸ್ಥಾನದ ಅಮರ ಸಂಗೀತಗಾರ. ಜಹಾಂಗೀರ್ ಮತ್ತು ಷಹಜಹಾನನ ಕಾಲದಲ್ಲಿ ಕೂಡ ಸಂಗೀತಕ್ಕೆ ಪ್ರೋತ್ಸಾಹ ಸಿಕ್ಕಿತು. ಆದರೆ ಔರಂಗಜೇಬನು ಸಂಗೀತವನ್ನು ನಿಷೇಧ ಮಾಡಿದನು. ಆದರೂ ಸಂಗೀತವು ಜನಮನದಿಂದ ಅಳಿಯಲಿಲ್ಲ.


ತಾನ್ ಸೇನ್

## ಮೊಗಲ್ ಸಾಮ್ರಾಜ್ಯದ ಅವನತಿ

ಔರಂಗಜೇಬನ ಕಾಲದಲ್ಲಿ ಸಾಮ್ರಾಜ್ಯವು ದುರ್ಬಲಗೊಂಡಿತು. ಇದಕ್ಕೆ ಕಾರಣಗಳು ಇವಾಗಿವೆ:

1. ಸರದಾರರು ಭ್ರಷ್ಟರಾಗತೊಡಗಿದರು.
2. ಸಿಂಹಾಸನದ ಉತ್ತರಾಧಿಕಾರಕ್ಕಾಗಿ ಭೀಕರ ಅಂತಃಕಲಹಗಳು ನಡೆದವು.
3. ಪ್ರಾಂತಾಧಿಕಾರಿಗಳು ಇದರ ಲಾಭಪಡೆದು ಸ್ವತಂತ್ರರಾಗಿ ಆಳ್ವಿಕೆ ನಡೆಸಿದರು.
4. ಎಲ್ಲಕ್ಕಿಂತ ಮುಖ್ಯವಾಗಿ ಔರಂಗಜೇಬನ ನೀತಿಗೆ ಎಲ್ಲೆಡೆ ವಿರೋಧ ವ್ಯಕ್ತವಾಯಿತು.
5. ಸಿಖ್ಖರು, ರಜಪೂತರು ಮತ್ತು ಮರಾಠರೊಂದಿಗೆ ದೀರ್ಘಕಾಲದ ಸಂಘರ್ಷಗಳು ಸಾಮ್ರಾಜ್ಯದ ಶಕ್ತಿಯನ್ನು ಪೂರ್ತಿಯಾಗಿ ಇಂಗಿಸಿತು.
6. ಈ ನಡುವೆ ನಾದಿರ್ ಷಾ ಎಂಬ ಪರ್ಷಿಯದ ದಾಳಿಕೋರನು ದಿಲ್ಲಿಯ ಮೇಲೆ ಆಕ್ರಮಣ ಗೈದನು. ಮೊಗಲರು ಎರಡು ನೂರು ವರ್ಷ ಕಾಲ ಸಂಗ್ರಹಿಸಿದ ಧನಕನಕಾದಿಗಳನ್ನು ಸೂರೆಗೈದನು. ಜಗತ್ಪ್ರಸಿದ್ಧ ಕೊಹಿನೂರ್ ವಜ್ರ ಹಾಗೂ ಷಹಜಹಾನನ ಮಯೂರಸಿಂಹಾಸನವನ್ನೂ ಅವನು ಒಯ್ದನು. ಮೊಗಲರ ಖಜಾನೆ ಬರಿದಾಯಿತು.

**ಕಾಲಗಣನೆ (ಸಾ. ಶ.)**

ಬಾಬರ್- ಸಾ. ಶ. 1526-1530
ಅಕ್ಬರ್- ಸಾ. ಶ. 1556-1605
ಔರಂಗಜೇಬ- ಸಾ. ಶ. 1659-1707

**ಹೊಸ ಪದಗಳು**

ಜೆಸಿಯಾ- ಮುಸಲ್ಮಾನ ದೊರೆಗಳು ಹಿಂದೂ ಜನರ ಮೇಲೆ ವಿಧಿಸುತ್ತಿದ್ದ ತಲೆ ಕಂದಾಯ.

ಯಾತ್ರಾ ತೆರಿಗೆ- ತೀರ್ಥ ಕ್ಷೇತ್ರಗಳಿಗೆ ಬರುವ ಹಿಂದೂಗಳ ಮೇಲೆ ವಿಧಿಸುತ್ತಿದ್ದ ತೆರಿಗೆ.

## ಅಭ್ಯಾಸಗಳು

### I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.

1. ಹಾಲ್ದಿಘಾಟ್ ಕದನದಲ್ಲಿ ಅಕ್ಬರ್ನಿಂದ ಸೋತ ರಜಪೂತ ದೊರೆ _______.
2. ಭೂಕಂದಾಯ ಪದ್ಧತಿಯನ್ನು ರೂಪಿಸಿದ ಅಕ್ಬರನ ಮಂತ್ರಿ _______.
3. ಚಿತ್ರಕಲೆಯ ಬೆಳವಣಿಗೆಗೆ ಪ್ರೋತ್ಸಾಹ ನೀಡಿದ ಮೊಗಲ್ ದೊರೆ _______.
4. ಸಂಗೀತವನ್ನು ನಿಷೇಧಿಸಿದ ಮೊಗಲ್ ದೊರೆ _______.

## II. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.

1. ಮೊಗಲ್ ಸಾಮ್ರಾಜ್ಯದ ಸ್ಥಾಪಕ ಯಾರು?
2. ಅಕ್ಬರನನ್ನು ವಿರೋಧಿಸಿದ ಮೇವಾಡದ ರಾಣಾ ಯಾರು?
3. ತಾಜ್ ಮಹಲ್ ಎಲ್ಲಿದೆ? ಇದನ್ನು ಯಾರು ಕಟ್ಟಿಸಿದರು?
4. ಮೊಗಲರ ಕಾಲದ ಪ್ರಮುಖ ಇತಿಹಾಸಕಾರರನ್ನು ಹೆಸರಿಸಿ.

## III. ಈ ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿ.

1. ಇಬಾದತ್‌ಖಾನ ಕುರಿತು ಟಿಪ್ಪಣಿ ಬರೆಯಿರಿ.
2. ಅಕ್ಬರನ ಧಾರ್ಮಿಕ ನೀತಿಯನ್ನು ಪರಿಚಯಿಸಿ.
3. ಮೊಗಲರ ಕಾಲದ ವಾಸ್ತುಶಿಲ್ಪಗಳನ್ನು ಪಟ್ಟಿಮಾಡಿ.
4. ಮೊಗಲ್ ಸಾಮ್ರಾಜ್ಯದ ಅವನತಿಗೆ ಕಾರಣಗಳೇನು?

## IV.ಕೆಳಗಿನ ‘ಎ’ ಪಟ್ಟಿ ಮತ್ತು ‘ಬಿ’ ಪಟ್ಟಿಯಲ್ಲಿನ ವಿಷಯಗಳನ್ನು ಹೊಂದಿಸಿ ಬರೆಯಿರಿ.

| ಎ | ಬಿ |
|---|---|
| 1. ತುಳಸಿದಾಸ | a. ಮಯೂರ ಸಿಂಹಾಸನ |
| 2. ಅಬುಲ್ ಫಜಲ್ | b. ತಲೆಕಂದಾಯ |
| 3. ಷಹಜಹಾನ್ | c. ರಾಮಚರಿತ ಮಾನಸ |
| 4. ಜೆಸಿಯಾ | e. ಫತೇಪುರ ಸಿಕ್ರಿ |
| 5. ಅಕ್ಬರ್ | f. ಅಕ್ಬರ್ ನಾಮ |

## ಚಟುವಟಿಕೆಗಳು

1. ಮೊಗಲರ ವಾಸ್ತುಶಿಲ್ಪಗಳ ಚಿತ್ರಗಳನ್ನು ವಿವರಣೆಯೊಂದಿಗೆ ಸಂಗ್ರಹಿಸಿ.
2. ಮೊಗಲ್ ಕಾಲದ ಐತಿಹಾಸಿಕ ಸ್ಥಳಗಳನ್ನು ಭೂಪಟದಲ್ಲಿ ಗುರುತಿಸಿ.
3. ಅಕ್ಬರ್ ಹಾಗೂ ಔರಂಗಜೇಬನ ಧಾರ್ಮಿಕ ನೀತಿಯಲ್ಲಿನ ವಿರೋಧಾಭಾಸಗಳನ್ನು ಚರ್ಚಿಸಿ.

## ಪಾಠ-8: ಮರಾಠರು

### ಪಾಠದ ಪರಿಚಯ

ಈ ಪಾಠದಲ್ಲಿ ಶಿವಾಜಿಯ ಬಾಲ್ಯ, ಆದರ್ಶಗಳು, ಮೊಗಲ್ ಸಾಮ್ರಾಜ್ಯ ಮತ್ತು ವಿಜಯಪುರ ಸೈನ್ಯಗಳನ್ನು ಹಿಮ್ಮೆಟ್ಟಿಸಿದ ಬಗೆ, ಮರಾಠಾ ರಾಜ್ಯದ ಸ್ಥಾಪನೆ, ಆಡಳಿತ ಕ್ರಮಗಳ ನಿರೂಪಣೆಯಿದೆ. ಸಾಮರ್ಥ್ಯಗಳು

1. ಶಿವಾಜಿಯ ಜೀವನ, ಸಾಹಸ, ಗುಣ ಮತ್ತು ಸಾಧನೆಗಳನ್ನು ಅರ್ಥಮಾಡಿಕೊಳ್ಳುವುದು.
2. ಭೂಪಟದಲ್ಲಿ ಶಿವಾಜಿಗೆ ಸಂಬಂಧಿಸಿದ ಐತಿಹಾಸಿಕ ಸ್ಥಳಗಳನ್ನು ಗುರುತಿಸುವುದು.

ಉತ್ತರ ಭಾರತದಲ್ಲಿ ಮೊಗಲರು ಉಚ್ಛ್ರಾಯ ಕಾಲದಲ್ಲಿದ್ದಾಗ ದಖ್ಖನ್ ಪ್ರದೇಶದಲ್ಲಿ ಮೊಗಲರನ್ನು ಪ್ರತಿಭಟಿಸಿ ಅಧಿಕಾರಕ್ಕೆ ಬಂದವರು ಮರಾಠರು. ಮರಾಠ ಮನೆತನದ ಸ್ಥಾಪಕ ಶಿವಾಜಿ.

ಶಿವಾಜಿ



ಶಿವಾಜಿಯು ಪುಣೆಯ ಬಳಿ ಇರುವ ಶಿವನೇರಿದುರ್ಗದಲ್ಲಿ ಜನಿಸಿದನು. ಅವನ ತಂದೆ ಷಹಜಿ ಭೋಸ್ಲೆ. ಆತನು ವಿಜಯಾಪುರ ಸುಲ್ತಾನನ ಬಳಿ ಉನ್ನತ ಹುದ್ದೆಯಲ್ಲಿ ಇದ್ದುದರಿಂದ ತಾಯಿ ಜೀಜಾಬಾಯಿಯ ಆಸರೆಯಲ್ಲಿ ಬೆಳೆದನು. ಗುರುವಾಗಿದ್ದ ದಾದಾಜಿ ಕೊಂಡದೇವ ಮತ್ತು ತಾನಾಜಿ ಮಾಲಸುರೆ ಶಿವಾಜಿಗೆ ಶಸ್ತ್ರಾಸ್ತ್ರ ವಿದ್ಯೆ ಕಲಿಸಿದರು. ಪ್ರಾರಂಭದಲ್ಲಿ ಶಿವಾಜಿಯು ಮರಾಠ ಮುಖಂಡರು ಮತ್ತು ಪಶ್ಚಿಮ ಘಟ್ಟಗಳ ಮಾವಳರೆಂಬ ಗಿರಿಜನರನ್ನು ಸೇರಿಸಿ ಪಡೆಯನ್ನು ಕಟ್ಟಿದನು.

ಶಿವಾಜಿಯ ಹೆಜ್ಜೆಗುರುತು: ಶಿವಾಜಿಯು ತನ್ನ 19 ನೇ ವರ್ಷದಲ್ಲಿ ವಿಜಯಪುರದ ಆದಿಲ್ ಷಾನ ಅಧೀನದಲ್ಲಿದ್ದ ತೋರಣ ದುರ್ಗವನ್ನು ವಶಪಡಿಸಿಕೊಂಡನು. ನಂತರ ರಾಯಗಡ, ಸಿಂಹಗಡ, ಪ್ರತಾಪಗಡ ಮುಂತಾದ ಕೋಟೆಗಳನ್ನು ಒಂದೊಂದಾಗಿ ಗೆದ್ದುಕೊಂಡನು. ಇದರಿಂದ ಕುಪಿತನಾದ ವಿಜಯಾಪುರ ಸುಲ್ತಾನನು ಶಿವಾಜಿಯನ್ನು ಹತ್ತಿಕ್ಕಲು ತನ್ನ ಸೇನಾನಿ ಅಫ್ಜಲ್‌ಖಾನನನ್ನು ಕಳುಹಿಸಿದನು. ಅಫ್ಜಲ್‌ಖಾನ್ ಒಪ್ಪಂದದ ಮಾತುಗಳನ್ನಾಡಲು ಶಿವಾಜಿಯನ್ನು ಬರಹೇಳಿ, ಮೋಸದಿಂದ ಅವನನ್ನು ಕೊಲ್ಲಲೆತ್ನಿಸಿದನು. ಆದರೆ ಇದನ್ನು ನಿರೀಕ್ಷಿಸಿದ್ದ ಶಿವಾಜಿಯು ತಾನು ಅಡಗಿಸಿಟ್ಟುಕೊಂಡಿದ್ದ 'ವ್ಯಾಘ್ರನಖ' ಎಂಬ ಆಯುಧದಿಂದ ಅಫ್ಜಲ್‌ಖಾನನನ್ನು ಕೊಂದನು.

ಶಿವಾಜಿಯು ಪ್ರವರ್ಧಮಾನಕ್ಕೆ ಬರುತ್ತಿರುವುದನ್ನು ಅರಿತ ಔರಂಗಜೇಬನು ಶಿವಾಜಿಯನ್ನು ನಿಗ್ರಹಿಸಲು ದಖನ್ ಪ್ರದೇಶದ ಅಧಿಕಾರಿಯಾಗಿದ್ದ ಷಯಿಸ್ತಾಖಾನನನ್ನು ಕಳುಹಿಸಿಕೊಟ್ಟ. ಆದರೆ ಶಿವಾಜಿ ಷಯಿಸ್ತಾಖಾನನನ್ನು ಉಪಾಯದಿಂದ ಸೋಲಿಸಿದನು.

ಇದರಿಂದ ಕೆರಳಿದ ಔರಂಗಜೇಬ್‌ನು ರಾಜಾ ಜಯಸಿಂಹನ ನೇತೃತ್ವದಲ್ಲಿ ಕಳುಹಿಸಿ ಕೊಟ್ಟ ಸೈನ್ಯವು ಶಿವಾಜಿಯನ್ನು ಸೋಲಿಸಿತು. ಅಲ್ಲದೆ ಶಿವಾಜಿಯ ಹಲವು ಕೋಟೆಗಳನ್ನು ವಶಪಡಿಸಿಕೊಂಡಿತು. ಅಂತಿಮವಾಗಿ ಜಯಸಿಂಹನು ಒಪ್ಪಂದ ಮಾಡಿಕೊಳ್ಳಲು ಶಿವಾಜಿಯನ್ನು ದಿಲ್ಲಿಗೆ ಆಹ್ವಾನಿಸಿದನು. ದಿಲ್ಲಿಗೆ ಆಗಮಿಸಿದ ಶಿವಾಜಿಯನ್ನು ಔರಂಗಜೇಬ್ ಬಂಧಿಸಿ ಆಗ್ರಾದ ಸೆರೆಮನೆಯಲ್ಲಿಟ್ಟನು. ಆದರೆ ಶಿವಾಜಿಯು ಉಪಾಯದಿಂದ ಸೆರೆಯಿಂದ ತಪ್ಪಿಸಿಕೊಂಡು ತನ್ನ ರಾಜಧಾನಿ ಸೇರಿದನು.

ನಂತರ ಕಳೆದುಕೊಂಡಿದ್ದ ಎಲ್ಲಾ ಕೋಟೆಗಳನ್ನು ಮೊಗಲರಿಂದ ಗೆದ್ದುಕೊಂಡು ಸೂರತ್ ನಗರಕ್ಕೆ ಮುತ್ತಿಗೆ ಹಾಕಿ ಅಪಾರ ಸಂಪತ್ತನ್ನು ಸೂರೆ ಮಾಡಿದನು.

ನಿಮಗೆ ತಿಳಿದಿರಲಿ: ಷಯಿಸ್ತಾಖಾನ್ ಪುಣೆಯ ಅರಮನಿಯಲ್ಲಿ ಬೀಡುಬಿಟ್ಟಿದ್ದ. ಎರಡು ವರ್ಷ ಕಳೆದರೂ ಶಿವಾಜಿಯನ್ನು ಸೆರೆಹಿಡಿಯಲು ಅವನಿಗೆ ಸಾಧ್ಯಾವಾಗಲಿಲ್ಲ. ಶಿವಾಜಿ ಸೈನಿಕರೊಂದಿಗೆ ವೇಷ ಬದಲಿಸಿ ಖಾನನ ವಾಸಸ್ಥಾನವನ್ನು ರಾತ್ರಿಯ ವೇಳೆ ಪ್ರವೇಶಿಸಿ ಆತನ ಮೇಲೆ ಹಠಾತ್ತನೆ ದಾಳಿಯಿಟ್ಟ. ಖಾನನು ಹೇಗೋ ದಾಳಿಯಿಂದ ಪಾರಾದರೂ ತನ್ನ ಹೆಬ್ಬೆರಳನ್ನು ಕಳೆದುಕೊಂಡ. ಷಯಿಸ್ತಾಖಾನ್ ಭಯಭೀತಿಯಿಂದ ಪುಣೆಯಿಂದ ಪಲಾಯನ ಮಾಡಿದ.



ಶಿವಾಜಿಯ ಕೋಟೆ, ರಾಯಗಡ

ಶಿವಾಜಿಯ ಪಟ್ಟಾಭಿಷೇಕ: ನಂತರ ರಾಯಗಡದಲ್ಲಿ 'ಛತ್ರಪತಿ' ಎಂಬ ಬಿರುದಿನೊಂದಿಗೆ ಶಿವಾಜಿಯ ಪಟ್ಟಾಭಿಷೇಕ ಆಯಿತು. ಮುಂದೆ ಶಿವಾಜಿಯು ಜಿಂಜಿ, ವೆಲ್ಲೂರು, ಮೈಸೂರು ಪ್ರಾಂತದ ವಿಶಾಲವಾದ ಭೂಭಾಗಗಳನ್ನು ಗೆದ್ದುಕೊಂಡು ಅಪಾರ ಸಂಪತ್ತನ್ನು ಸಂಗ್ರಹಿಸಿದನು. ಆದರೆ ಮರಾಠರ ವೈಭವವನ್ನು ನೋಡಲು ಶಿವಾಜಿ ಬಹುಕಾಲ ಬಾಳಲಿಲ್ಲ.

## ಶಿವಾಜಿಯ ಆಡಳಿತ

ಆಡಳಿತದಲ್ಲಿ ಸಹಕರಿಸಲು ಅಷ್ಟಪ್ರಧಾನರು ಎಂಬ ಎಂಟು ಮಂತ್ರಿಗಳಿದ್ದರು. ಪ್ರಧಾನಮಂತ್ರಿಯನ್ನು ಪೇಶ್ವೆ ಎಂದು ಕರೆಯಲಾಗುತ್ತಿತ್ತು. ಶಿವಾಜಿಯ ಮರಣ ನಂತರದಲ್ಲಿ ಮರಾಠ ರಾಜ್ಯದಲ್ಲಿ ಉಂಟಾದ ರಾಜಕೀಯ ಬಿಕ್ಕಟ್ಟನ್ನು ಪೇಶ್ವೆಗಳು ಶಮನಗೊಳಿಸಿ ಆಡಳಿತವನ್ನು ಸುಗಮಗೊಳಿಸಿದರು. ಮುಂದಿನ ಮರಾಠ ಆಡಳಿತ ಪೇಶ್ವೆಗಳ ಆಡಳಿತವೇ ಆಗಿತ್ತು. ಬಾಲಾಜಿ ವಿಶ್ವನಾಥ, ಒಂದನೆಯ ಬಾಜೀರಾಯ ಮತ್ತು ಬಾಲಾಜಿ ಬಾಜೀರಾಯ ಇವರು ಮರಾಠ ರಾಜ್ಯವನ್ನಾಳಿದ ಪ್ರಮುಖ ಪೇಶ್ವೆಗಳು.

## ಹೊಸ ಪದಗಳು

ಗೆರಿಲ್ಲ ಯುದ್ಧ ತಂತ್ರ- ಶತ್ರುಗಳನ್ನು ಮುಖಾಮುಖಿ ಎದುರುಗೊಳ್ಳದೆ ಮರೆಮಾಚಿ ದಾಳಿ ನಡೆಸುವುದು.

ಛತ್ರಪತಿ- ಮಹಾರಾಜ.

## ಅಭ್ಯಾಸಗಳು

### I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.

1. ಶಿವಾಜಿಯ ಗುರು ________.
2. ಶಿವಾಜಿಯು ಅಫ್ಜಲ್ ಖಾನನನ್ನು ________ ಎಂಬ ಆಯುಧದಿಂದ ಕೊಂದನು.
3. ಶಿವಾಜಿಯನ್ನು ಸೋಲಿಸಿದ ಔರಂಗಜೇಬನ ದಂಡನಾಯಕ ________.

### II. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.

1. ಶಿವಾಜಿಯು ಎಲ್ಲಿ ಜನಿಸಿದನು?
2. ಶಿವಾಜಿಯ ತಂದೆ ತಾಯಿ ಯಾರು?
3. ವಿಜಯಪುರದ ಸುಲ್ತಾನನು ಶಿವಾಜಿಯನ್ನು ಏಕೆ ವಿರೋಧಿಸಿದನು?
4. ಷಯಿಸ್ತಾಖಾನ್ ಯಾರು?
5. ಶಿವಾಜಿಯ ಪಟ್ಟಾಭಿಷೇಕ ಎಲ್ಲಿ ನಡೆಯಿತು? ಮತ್ತು ಅವನು ಧರಿಸಿದ ಬಿರುದು ಯಾವುದು?
6. ಮರಾಠ ರಾಜ್ಯವನ್ನಾಳಿದ ಪ್ರಮುಖ ಪೇಶ್ವೆಗಳನ್ನು ಹೆಸರಿಸಿ.

### ಚಟುವಟಿಕೆ

1. ಭೂಪಟದಲ್ಲಿ ಶಿವಾಜಿಗೆ ಸಂಬಂಧಿಸಿದ ಐತಿಹಾಸಿಕ ಸ್ಥಳಗಳನ್ನು ಗುರುತಿಸಿ.

## ಪಾಠ-9: ಭಾರತಕ್ಕೆ ಯುರೋಪಿಯನ್ನರ ಆಗಮನ

### ಪಾಠದ ಪರಿಚಯ

ಸಾ. ಶ 1498 ರ ಮೇ 17ರಂದು ವಾಸ್ಕೋಡಗಾಮನು ಕೇರಳದ ಕಲ್ಲಿಕೋಟೆಯನ್ನು ತಲುಪಿ ಭಾರತಕ್ಕೆ ನೂತನ ಜಲಮಾರ್ಗವನ್ನು ಕಂಡು ಹಿಡಿದನು. ಇದು ಯುರೋಪಿಯನ್ನರು ಭಾರತಕ್ಕೆ ಬರಲು ಕಾರಣವಾಯಿತು. ಈ ಸಮುದ್ರಮಾರ್ಗದ ಅನ್ವೇಷಣೆ (ಸಂಶೋಧನೆ)ಯಿಂದಾಗಿ ಪೋರ್ಚುಗೀಸರು, ಡಚ್ಚರು, ಇಂಗ್ಲಿಷರು ಮತ್ತು ಫ್ರೆಂಚರು ವ್ಯಾಪಾರಕ್ಕಾಗಿ ಭಾರತಕ್ಕೆ ಬಂದರು.

### ಸಾಮರ್ಥ್ಯಗಳು

1. ಭಾರತದಲ್ಲಿ ಯುರೋಪಿಯನ್ನರ ಆರಂಭಿಕ ಚಟುವಟಿಕೆಗಳನ್ನು ಅರಿಯುವರು.
2. ಭಾರತದಲ್ಲಿ ಯುರೋಪಿಯನ್ನರ ನಡುವೆ ನಡೆದ ಸಂಘರ್ಷಗಳನ್ನು ಅರ್ಥೈಸಿಕೊಳ್ಳುವುದು.
3. ಭಾರತಕ್ಕೆ ಬಂದ ಯುರೋಪಿನ ವ್ಯಾಪಾರಿ ಕಂಪನಿಗಳನ್ನು ಪರಿಚಯಿಸುವುದು.
4. ಅಂತಿಮವಾಗಿ ಇಂಗ್ಲಿಷರು ಭದ್ರವಾಗಿ ನೆಲೆಸಲು ಕಾರಣವಾದ ಅಂಶಗಳನ್ನು ಪಟ್ಟಿ ಮಾಡುವುದು.
5. ಭಾರತದ ರೇಖಾ ನಕಾಶೆಯಲ್ಲಿ ಯುರೋಪಿಯನ್ನ ವ್ಯಾಪಾರಿಗಳ ನೆಲೆಗಳನ್ನು ಗುರುತಿಸುವುದು.

### ಪೋರ್ಚುಗೀಸರು ( ಸಾ. ಶ. 1498-1961)

ಸಾ. ಶ 1498 ರ ಮೇ 17 ರಂದು ವಾಸ್ಕೋಡಗಾಮನು ಕೇರಳದ ಕಲ್ಲಿಕೋಟೆಯನ್ನು ತಲುಪುವ ಮೂಲಕ ಭಾರತಕ್ಕೆ ಹೊಸ ಜಲಮಾರ್ಗವನ್ನು ಕಂಡು ಹಿಡಿದನು. ಈ ಜಲಮಾರ್ಗದ ಮೂಲಕ ಭಾರತವನ್ನು ಪ್ರವೇಶಿಸಿದ ಯುರೋಪಿಯನ್ನರಲ್ಲಿ ಪೋರ್ಚಗೀಸರು ಮೊದಲಿಗರು. ಪೂರ್ವದ ದೇಶಗಳೊಂದಿಗೆ ವ್ಯಾಪಾರದ ಏಕಸಾಮ್ಯವನ್ನು ಸಾಧಿಸಿದರು. ವಸಾಹತು ಸಾಮ್ರಾಜ್ಯವನ್ನು ನಿರ್ಮಿಸುವುದು, ಕ್ರೈಸ್ತ ಧರ್ಮವನ್ನು ಪ್ರಚಾರ ಮಾಡುವುದು ಇವರ ಮೂಲ ಗುರಿಗಳಾಗಿದ್ದವು.

### ಪೋರ್ಚಗೀಸರ ಏಳಿಗೆಗೆ ಕಾರಣಗಳು

1. ಕಲ್ಲಿಕೋಟೆಯ ದೊರೆ ಜಾಮೊರಿನ್ ಪೋರ್ಚಗೀಸ್ ನಾವಿಕ ವಾಸ್ಕೋಡಗಾಮನಿಗೆ ವ್ಯಾಪಾರಕ್ಕೆ ಅನುಮತಿ ನೀಡಿದನು.
2. ಸಾ. ಶ. 1509 ರಲ್ಲಿ ಅಲ್ಬುಕರ್ಕ ಭಾರತಕ್ಕೆ ಗವರ್ನರ್ (ವೈಸರಾಯ್) ಆಗಿ ನೇಮಕಗೊಂಡನು. ಈತನು ಸಾ. ಶ. 1510 ರಲ್ಲಿ ವಿಜಯಪುರದ ಸುಲ್ತಾನನಿಂದ

ಗೋವಾವನ್ನು ವಶಪಡಿಸಿಕೊಂಡನು. ಪೋರ್ಚುಗೀಸರು ಭಾರತವನ್ನು ಬಿಟ್ಟು ಹೋಗುವವರೆಗು ಗೋವ ಪೋರ್ಚುಗೀಸರ ರಾಜಧಾನಿಯಾಗಿತ್ತು.

3. ಅಲ್ಬುಕರ್ಕನ ಬಳಿಕ ಬಂದ ಗವರ್ನರ್‌ಗಳು ದಿಯು, ದಮನ್, ಸಾಲ್ಸೆಟ್, ಬೆಸ್ಸೀನ್, ಚೌಲ್, ಮುಂಬೈ, ಸಾನ್‌ಥೋಮ್ ಮತ್ತು ಬಂಗಾಳದ ಹೂಗ್ಲಿ ಮುಂತಾದ ಕಡೆ ತಮ್ಮ ವಸಾಹತುಗಳನ್ನು ಸ್ಥಾಪಿಸಿದರು.

**ಪೋರ್ಚುಗೀಸರ ಅವನತಿಗೆ ಕಾರಣಗಳು**

1. ಬಲಿಷ್ಠ ನೌಕಾಪಡೆಯನ್ನು ಹೊಂದಿದ್ದ ಡಚ್ಚರು ಮತ್ತು ಇಂಗ್ಲಿಷರು ಪೋರ್ಚಗೀಸರ ಪ್ರಬಲ ಪ್ರತಿಸ್ಪರ್ಧಿಗಳಾಗಿದ್ದರು.
2. ಪೋರ್ಚಗೀಸ್ ಸರ್ಕಾರದ ನೌಕರರು ಭ್ರಷ್ಟರಾಗಿ, ಸ್ವಾಮಿನಿಷ್ಠೆ ಕಳೆದುಕೊಂಡರು. ಮುಂದೆ ಅವರ ಸರ್ಕಾರ ಹೀನ ಸ್ಥಿತಿಗೆ ಇಳಿಯಿತು.
3. ಮತಾಂಧತೆಯೇ ಪೋರ್ಚಗೀಸರ ಅವನತಿಗೆ ಮುಖ್ಯ ಕಾರಣವಾಗಿತ್ತು. ಅವರು ಇಲ್ಲಿಯ ವಿವಿಧ ಧರ್ಮೀಯರನ್ನು ಬಲವಂತದಿಂದ ಮತಾಂತರಿಸಿದರು.
4. ವಿಜಯನಗರ ಸಾಮ್ರಾಜ್ಯದ ಅವನತಿ ನಂತರ ಅವರ ವ್ಯಾಪಾರ ಕುಂಠಿತವಾಯಿತು.

ಪೋರ್ಚಗೀಸರ ಫ್ರಾನ್ಸಿಸ್ಕೋ-ಡಿ-ಅಲ್ಮೇಡಾ ಭಾರತದ ಪ್ರಥಮ ವೈಸರಾಯ್ (ಗವರ್ನರ್). ಭಾರತಕ್ಕೆ ಬಂದ ಮೊಟ್ಟ ಮೊದಲ ಯೂರೋಪಿಯನ್ನರು ಹಾಗೂ ಭಾರತ ತೊರೆದ ಕಟ್ಟಕಡೆಯ ಯೂರೋಪಿಯನ್ನರು ಪೋರ್ಚಗೀಸರೇ ಆಗಿದ್ದಾರೆ. ಕೊನೆಯವರೆಗೆ ಗೋವಾ, ದಿಯು ಮತ್ತು ದಮನ್ ಮಾತ್ರವೇ ಪೋರ್ಚಿಗೀಸರ ವಶದಲ್ಲಿ ಉಳಿದವು. ಬ್ರಿಟಿಷ್ ಆಳಿಕೆ ಸಾ. ಶ. 1947 ರಲ್ಲಿ ಕೊನೆಗೊಂಡರೂ ಪೋರ್ಚಗೀಸರು ನಮ್ಮ ನೆಲದಿಂದ ಕದಲಲಿಲ್ಲ. ಗೋವೆಯ ವಿಮೋಚನೆಗಾಗಿ ಅಲ್ಲಿಯ ಭಾರತೀಯರು ಅಹಿಂಸಾತ್ಮಕ ಚಳವಳಿ ಹೂಡಿದರು. ಆದರೆ ಚಳವಳಿಗಾರರನ್ನು ಅಮಾನುಷವಾಗಿ ಹಿಂಸೆಗೊಳಪಡಿಸಲಾಯಿತು. ಕೊನೆಗೆ ಸಾ. ಶ. 1961 ರಲ್ಲಿ ಭಾರತೀಯ ಸೇನಾಪಡೆಯು ಪೋರ್ಚಗೀಸರನ್ನು ಬಡಿದೋಡಿಸುವುದರೊಂದಿಗೆ ಗೋವಾ ವಿಮೋಚನೆಗೊಂಡಿತು.

**ಡಚ್ಚರು (ಸಾ. ಶ. 1596-1792)**

ಪೋರ್ಚುಗೀಸರ ನಂತರ ಭಾರತಕ್ಕೆ ಬಂದ ಯೂರೋಪಿಯನ್ನರಲ್ಲಿ ನೆದರ್‌ಲ್ಯಾಂಡ್ ದೇಶದ ಡಚ್ಚರು ಪ್ರಮುಖರು. ಸಾ. ಶ. 1602 ರಲ್ಲಿ "ಡಚ್ ಈಸ್ಟ ಇಂಡಿಯಾ ಕಂಪನಿ" ಸ್ಥಾಪನೆಯಾಯಿತು. ಈ ಕಂಪನಿಯು ಪೂರ್ವದ ದೇಶಗಳೊಂದಿಗೆ ವ್ಯಾಪಾರವನ್ನು ಮಾಡುವ ಏಕಸಾಮ್ಯವನ್ನು ಪಡೆಯಿತು. ಈ ಪ್ರದೇಶಗಳಲ್ಲಿ ಯುದ್ಧ ಮಾಡುವ, ಶಾಂತಿ ಸಂಧಾನಗಳನ್ನು ಏರ್ಪಡಿಸುವ ಅಧಿಕಾರವನ್ನು ಪಡೆಯಿತು. 'ಪುಲಿಕಾಟ್' ಡಚ್ಚರ ರಾಜಧಾನಿಯಾಗಿತ್ತು.

ಡಚ್ಚರ ವ್ಯಾಪಾರ ಕೇಂದ್ರಗಳು: ಭಾರತದ ಆಗ್ರಾ, ಮಚಲೀಪಟ್ಟಣ, ಸೂರತ್, ಕಾರೈಕಲ್, ನಾಗಪಟ್ಟಣಂ, ಕೊಚ್ಚಿ ಮೊದಲಾದ ಕಡೆಗಳಲ್ಲಿ ಡಚ್ಚರ ವ್ಯಾಪಾರ ಕೇಂದ್ರಗಳಿದ್ದವು.

ಡಚ್ಚರ ಅವನತಿ: ಡಚ್ಚರು ಇಂಗ್ಲಿಷರೊಡನೆ ಸಂಘರ್ಷಕ್ಕೆ ಇಳಿದರು. ಆದರೆ ಇಂಗ್ಲಿಷರು ಡಚ್ಚರನ್ನು ಸೋಲಿಸಿದರು. ಭಾರತದಲ್ಲಿ ಇಂಗ್ಲಿಷರ ಪೈಪೋಟಿಯನ್ನು ಎದುರಿಸಲಾಗದ ಡಚ್ಚರು ತಮ್ಮ ಆಗ್ನೇಯ ಏಷ್ಯಾ ದ್ವೀಪರಾಷ್ಟ್ರಗಳ ಕಡೆಗೆ ಗಮನ ಹರಿಸಿದರು.

ಆಗ್ನೇಯ ಏಷ್ಯಾದ ದ್ವೀಪಗಳು: ಇಂಡೊನೇಷಿಯಾ, ಮಲಯ, ಥೈಲ್ಯಾಂಡ್, ಫಿಲಿಪೈನ್ಸ್ ಕಾಂಬೋಡಿಯಾ.

## ಇಂಗ್ಲಿಷರು (ಸಾ. ಶ. 1600-1947)

ಇಂಗ್ಲಿಷರು ಶಾಂತಿಯುತ ವ್ಯಾಪಾರವೇ ತಮ್ಮ ನೀತಿಯೆಂಬುದನ್ನು ಮೊದಲಿನಿಂದ ಅನುಸರಿಸಿಕೊಂಡು ಬಂದರು. ಆದರೆ ಭಾರತದ ಹದಗೆಟ್ಟ ರಾಜಕೀಯ ಪರಿಸ್ಥಿತಿಯ ಅನುಕೂಲ ಪಡೆದು ರಾಜಕೀಯ ಸಾರ್ವಭೌಮತ್ವವನ್ನು ಸ್ಥಾಪಿಸಿದರು.

ಇಂಗ್ಲೆಂಡಿನ ವರ್ತಕರು ಪೂರ್ವ ದೇಶಗಳೊಡನೆ ವ್ಯಾಪಾರ ಸಂಪರ್ಕ ಹೊಂದಲು ಬಯಸಿ ಸಾ. ಶ. 1600 ರಲ್ಲಿ "ಈಸ್ಟ್ ಇಂಡಿಯಾ ಕಂಪನಿ" ಯನ್ನು ಸ್ಥಾಪಿಸಿದರು. ಎಲಿಜಬೆತ್ ರಾಣಿಯ ಅನುಮತಿ ಪಡೆದು ಭಾರತದೊಡನೆ ವ್ಯಾಪಾರ ಸಂಪರ್ಕ ಬೆಳೆಸಿದರು.

ಪ್ರಾರಂಭದಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಹಡಗುಗಳು ಸೂರತ್ ಬಂದರಿನಲ್ಲಿ ತಂಗುತ್ತಿದ್ದವು. ಸರ್ ಥಾಮಸ್ ರೋ ಸಾ. ಶ. 1615 ರಲ್ಲಿ ಮೊಗಲರ ಚಕ್ರವರ್ತಿ ಜಹಾಂಗೀರನ ಆಸ್ಥಾನಕ್ಕೆ ಭೇಟಿ ನೀಡಿ ಸೂರತ್‌ನಲ್ಲಿ ವ್ಯಾಪಾರ ಮಾಡಲು ಅನುಮತಿ ಪಡೆದನು. ನಂತರ ಆಗ್ರಾ, ಅಹ್ಮದಾಬಾದ್ ಮತ್ತು ಬ್ರೋಚ್‌ಗಳಲ್ಲಿ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಿದರು. ಆನಂತರ ಮದ್ರಾಸ್, ಕಲ್ಕತ್ತ ಮತ್ತು ಮುಂಬೈಗಳಲ್ಲಿಯೇ ತಮ್ಮ ವ್ಯಾಪಾರದ ಕೋಠಿ(ಮಳಿಗೆ)ಗಳನ್ನು ಸ್ಥಾಪಿಸಿದರು. ಕಲ್ಕತ್ತ ಬ್ರಿಟಿಷರ ಮೊದಲ ರಾಜಧಾನಿಯಾಗಿತ್ತು.

ಕಾಲಕ್ರಮೇಣ ಈಸ್ಟ್ ಇಂಡಿಯಾ ಕಂಪನಿಯ ಲಾಭವು ಗಣನೀಯವಾಗಿ ಹೆಚ್ಚುತ್ತಾ ಹೋಯಿತು. ಮೊಗಲ್ ಚಕ್ರವರ್ತಿ ಫರೂಕ್ ಸಿಯಾರನಿಂದ ಬಂಗಾಲ ಪ್ರಾಂತ್ಯ (ಈಗಿನ ಬಂಗಾಳ, ಬಿಹಾರ ಮತ್ತು ಒರಿಸ್ಸಾ) ಮತ್ತು ಸೂರತ್‌ನಲ್ಲಿ ಸುಂಕರಹಿತ (ತೆರಿಗೆ ರಹಿತ) ವ್ಯಾಪಾರ ಮಾಡುವ ಪರವಾನಗಿಯಾದ 'ದಸ್ತಕ್' ಗಳನ್ನು ಪಡೆದರು. ಇವುಗಳ ಸಹಾಯದಿಂದ ಇಂಗ್ಲಿಷರು ದೇಶೀಯ ವ್ಯಾಪಾರಿಗಳಿಗಿಂತ ಶಕ್ತಿವಂತರಾದರು.

ಬ್ರಿಟಿಷರು ತಮ್ಮ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳಲು ತಮ್ಮ ವಸತಿ ಪ್ರದೇಶಗಳ ಸುತ್ತಲು ಕೋಟೆಗಳನ್ನು ಕಟ್ಟಿದರು. ಕೋಟೆಗಳ ರಕ್ಷಣೆಗಾಗಿ ಸೈನಿಕರನ್ನು, ಮದ್ದುಗುಂಡುಗಳನ್ನು ಇಟ್ಟುಕೊಳ್ಳಲು ಆರಂಭಿಸಿದರು. ಬಹುಬೇಗ ಇಂಗ್ಲಿಷರ ಸೇನಾಬಲವು ಬಲಿಷ್ಠವಾಗಿ ಬೆಳೆಯಿತು.

ಸುಂಕವಿಲ್ಲದೆ ಮುಕ್ತ ವ್ಯಾಪಾರ ನಡೆಸಲು ಬ್ರಿಟಿಷ್ ವರ್ತಕರಿಗೆ ನೀಡಲಾದ ವಿಶೇಷ ಪರವಾನಗಿ ಪತ್ರ(ಪಾಸು)ಗಳೇ ದಸ್ತಕಗಳು.

## ಫ್ರೆಂಚರು ( ಸಾ. ಶ. 1664-1954)

ವ್ಯಾಪಾರಕ್ಕಾಗಿ ಭಾರತಕ್ಕೆ ಬಂದ ಯುರೋಪಿಯನ್ನರಲ್ಲಿ ಫ್ರೆಂಚರೇ ಕೊನೆಯವರು. ಇವರು ಸಾ. ಶ. 1664 ರಲ್ಲಿ "ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿ" ಯನ್ನು ಸ್ಥಾಪಿಸಿದರು.

ಭಾರತದಲ್ಲಿ ಫ್ರೆಂಚರು ತಮ್ಮ ಪ್ರಥಮ ವ್ಯಾಪಾರ ಕೋಠಿಯನ್ನು ಸಾ.ಶ.1668ರಲ್ಲಿ ಸೂರತ್‌ನಲ್ಲಿ ತೆರೆದರು. ನಂತರ ಸ್ವಲ್ಪ ಕಾಲದಲ್ಲಿಯೇ ಭಾರತದ ನಾನಾ ಭಾಗಗಳಲ್ಲಿ ತಮ್ಮ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಿದರು.

ಫ್ರೆಂಚರ ವ್ಯಾಪಾರ ಕೇಂದ್ರಗಳು: ಪಾಂಡಿಚೇರಿ, ಮಚಲಿಪಟ್ಟಣ, ಕಲ್ಲಿಕೋಟೆ, ಮಾಹೆ, ಕಾರೈಕಲ್ ಮತ್ತು ಚಂದ್ರನಗರಗಳಲ್ಲಿ ತಮ್ಮ ವ್ಯಾಪಾರ ಕೇಂದ್ರಗಳನ್ನು ತೆರೆದರು. ಪಾಂಡಿಚೇರಿ ಫ್ರೆಂಚರ ರಾಜಧಾನಿಯಾಗಿತ್ತು.

ಫ್ರೆಂಚರ ಗವರ್ನರಾಗಿ ಬಂದ ಡೂಪ್ಲೆ ಚಾಣಾಕ್ಷತೆಯಿಂದ ಹೈದ್ರಾಬಾದ್ ಮತ್ತು ಕರ್ನಾಟಿಕ್ (ತಮಿಳು ನಾಡಿನ ಪೂರ್ವಭಾಗ) ರಾಜ್ಯಗಳಲ್ಲಿ ಫ್ರೆಂಚರ ಪ್ರಭಾವವನ್ನು ಹೆಚ್ಚಿಸಿದನು. ಭಾರತಕ್ಕೆ ವ್ಯಾಪಾರಕ್ಕೆಂದು ಆಗಮಿಸಿದ ಬ್ರಿಟಿಷರು ಮತ್ತು ಫ್ರೆಂಚರ ಮಧ್ಯೆ ರಾಜಕೀಯ ಹಾಗೂ ವಾಣಿಜ್ಯ ಅಭಿವೃದ್ಧಿಗಾಗಿ ಅನೇಕ ಯುದ್ಧಗಳು ನಡೆದವು. ಅವುಗಳನ್ನು ಕರ್ನಾಟಿಕ್ ಯುದ್ಧಗಳೆಂದು ಕರೆಯಲಾಗಿದೆ.

**ಫ್ರೆಂಚರ ಅವನತಿಗೆ ಕಾರಣಗಳು**

1. ಭಾರತದಲ್ಲಿದ್ದ ಫ್ರೆಂಚ್ ಸೇನಾ ನಾಯಕರಿಗೆ ಫ್ರಾನ್ಸ್ ಸರಕಾರ ಪೂರ್ಣ ಬೆಂಬಲವನ್ನು ನೀಡಲಿಲ್ಲ.
2. ಫ್ರಾನ್ಸಿನಲ್ಲಿ ರಾಜಕೀಯ ಗೊಂದಲ ಮತ್ತು ಕ್ರಾಂತಿಗಳು ಕಂಡು ಬಂದವು. ಇದು ಭಾರತದಲ್ಲಿ ಅವರ ಅವನತಿಗೆ ಕಾರಣವಾಯಿತು.
3. ಫ್ರೆಂಚರ ನೌಕಾಪಡೆಯು ಇಂಗ್ಲಿಷರ ನೌಕಾಪಡೆಗಿಂತ ಉತ್ತಮ ದರ್ಜೆಯದಾಗಿರಲಿಲ್ಲ.

**ಕಾಲಗಣನೆ (ಸಾ. ಶ.)**

1. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ: 1600
2. ಡಚ್ ಈಸ್ಟ್ ಇಂಡಿಯಾ ಕಂಪನಿ: 1602
3. ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿ: 1664




## ನ್ಯಾಸಗಳು

### I. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

1. ಭಾರತಕ್ಕೆ ವ್ಯಾಪಾರಕ್ಕಾಗಿ ಸಮುದ್ರ ಮಾರ್ಗವಾಗಿ ಮೊದಲಿಗೆ ಬಂದಿದ್ದ ಯುರೋಪಿಯನ್ನರು ಯಾರು?
2. ಭಾರತಕ್ಕೆ ಜಲಮಾರ್ಗವನ್ನು ಕಂಡುಹಿಡಿದವರು ಯಾರು?
3. ಡಚ್ಚರ ರಾಜಧಾನಿ ಯಾವುದು?
4. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ಯಾವಾಗ ಸ್ಥಾಪನೆಯಾಯಿತು?
5. ಫ್ರೆಂಚರ ವ್ಯಾಪಾರ ಕೇಂದ್ರಗಳನ್ನು ಹೆಸರಿಸಿ.
6. ಬ್ರಿಟಿಷರಿಗೆ 'ದಸ್ತಕ್' ನೀಡಿದ ಮೊಗಲ್ ದೊರೆಯಾರು?

**II. ಈ ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿರಿ.**

1. ಭಾರತದಲ್ಲಿ ಪೋರ್ಚಗೀಸರ ಅವನತಿಗೆ ಕಾರಣವಾದ ಅಂಶಗಳನ್ನು ಪಟ್ಟಿಮಾಡಿ.
2. ಭಾರತದಲ್ಲಿ ಫ್ರೆಂಚರ ಅವನತಿಗೆ ಕಾರಣಗಳು ಯಾವುವು?

**III. ಈ ಕೆಳಗಿನ 'ಎ' ಪಟ್ಟಿಗೆ ಸಂಬಂಧಿಸಿದ 'ಬಿ' ಪಟ್ಟಿಯಲ್ಲಿನ ವಿಷಯಗಳನ್ನು** ಹೊಂದಿಸಿ ಬರೆಯಿರಿ.

| ಎ | ಬಿ |
|---|---|
| 1. ಪೋರ್ಚುಗೀಸರು | a. ಪಾಂಡಿಚೇರಿ |
| 2. ಡಚ್ಚರು | b. ಕಲ್ಕತ್ತ |
| 3. ಫ್ರೆಂಚರು | c. ಪುಲಿಕಾಟ್ |
| 4. ಬ್ರಿಟಿಷರು | d. ಗೋವ |

**ಚಟುವಟಿಕೆ**

1. ಭಾರತದ ರೇಖಾ ನಕಾಶೆಯನ್ನು ಬರೆದು ಯುರೋಪಿಯನ್ನರ ಆರಂಭಿಕ ನೆಲೆಗಳನ್ನು ಗುರುತಿಸಿರಿ.

## ಪಾಠ-10: ಭಾರತದಲ್ಲಿ ಬ್ರಿಟಿಷರ ರಾಜಕೀಯ ಏಳಿಗೆ

### ಪಾಠದ ಪರಿಚಯ

ಬ್ರಿಟಿಷರ ಮತ್ತು ಫ್ರೆಂಚರ ಸೈನಿಕ ಸಾಮರ್ಥ್ಯ, ರಾಜಕೀಯ ಮಹತ್ವಾಕಾಂಕ್ಷೆ ಹಾಗೂ ಸ್ಥಳೀಯ ಅರಸರ ಅಂತಃಕಲಹಗಳು ಯುದ್ಧಗಳಿಗೆ ಪ್ರೇರಣೆ ನೀಡಿದವು. ಇದರಿಂದ ಬ್ರಿಟಿಷರು ಭಾರತದಲ್ಲಿ ಅನೇಕ ಯುದ್ಧಗಳನ್ನು ಮಾಡಿದರು. ಚಾಣಕ್ಷತೆಯಿಂದ ಮತ್ತು ಕುಟಿಲ ನೀತಿಗಳಿಂದ ಕರ್ನಾಟಿಕ ಮತ್ತು ಬಂಗಾಳದಲ್ಲಿ ಸಾ. ಶ. 1857 ರ ವರೆಗೆ ತಮ್ಮ ಆಧಿಪತ್ಯವನ್ನು ಸ್ಥಾಪಿಸಿದರು.

### ಸಾಮರ್ಥ್ಯಗಳು

1. ಭಾರತದಲ್ಲಿ ಬ್ರಿಟಿಷರ ರಾಜಕೀಯ ಏಳಿಗೆಯಾಗಲು ಸಹಾಯಕವಾದ ಅಂಶಗಳನ್ನು ತಿಳಿಯುವುದು.
2. ಪ್ಲಾಸಿ ಮತ್ತು ಬಕ್ಸಾರ ಕದನದ ಕಾರಣಗಳನ್ನು, ಪರಿಣಾಮಗಳನ್ನು ತಿಳಿಯುವುದು.
3. ಕರ್ನಾಟಿಕ್ ಯುದ್ಧಗಳ ಕಾರಣ ಮತ್ತು ಪರಿಣಾಮಗಳನ್ನು ಅರಿಯುವುದು.
4. ಸಹಾಯಕ ಸೈನ್ಯ ಪದ್ಧತಿಯ ಅರ್ಥ, ಕರಾರುಗಳನ್ನು ತಿಳಿದುಕೊಳ್ಳುವುದು.
5. ದತ್ತು ಮಕ್ಕಳಿಗೆ ಹಕ್ಕಿಲ್ಲವೆಂಬ ನೀತಿಯನ್ನು ಪರಿಚಯಿಸುವುದು.

**ಪ್ಲಾಸಿ ಕದನ (ಸಾ. ಶ. 1757)**



ಸಿರಾಜ್ ಉದ್ದೌಲ್

ಬಂಗಾಲವು ಮೊಗಲ್ ಸಾಮ್ರಾಜ್ಯದ ಸಮೃದ್ಧ ಪ್ರಾಂತವಾಗಿತ್ತು. ಅದರ ಪ್ರಾಂತಾಧಿಕಾರಿಯಾಗಿದ್ದ ಅಲಿವರ್ಧಿಖಾನ್, ಮೊಗಲ್ ಸಾಮ್ರಾಜ್ಯ ಅವನತಿ ಹಾದಿಯಲ್ಲಿದ್ದಾಗ ಸ್ವತಂತ್ರನಾದನು. ಆತನ ನಂತರ ಸಿರಾಜ್-ಉದ್-ದೌಲ್‌ನು ಬಂಗಾಲದ ನವಾಬನಾದನು. ನವಾಬ ಸಿರಾಜ್-ಉದ್-ದೌಲ್‌ನು ಯುವಕನಾಗಿದ್ದರಿಂದ ಇಂಗ್ಲಿಷರು ಅವನನ್ನು ಕಡೆಗಣಿಸಿ, ಅವನ ಅನುಮತಿ ಪಡೆಯದೆ ಕಲ್ಕತ್ತದಲ್ಲಿ 'ಫೋರ್ಟ್‌ವಿಲಿಯಂ' ಕೋಟೆಯನ್ನು ಬಲಪಡಿಸಿದರು. ಅಲ್ಲದೆ ವ್ಯಾಪಾರದ ರಿಯಾಯಿತಿಗಳನ್ನು ದುರುಪಯೋಗ ಮಾಡುತ್ತಿದ್ದರು.

**ಪ್ಲಾಸಿ ಕದನಕ್ಕೆ ಕಾರಣ**

ಇಂಗ್ಲಿಷರು ತನ್ನ ಆದೇಶಗಳನ್ನು ಪಾಲಿಸದೆ, ವೈರಿಗಳೊಡನೆ ಸೇರಿ ಕುತಂತ್ರ ಮಾಡುತಿದ್ದಾರೆಂದು ಸಿರಾಜ್ ಉದ್ದೌಲ ಭಾವಿಸಿದನು. ಇದರಿಂದ ಕೋಪಗೊಂಡು ಇಂಗ್ಲಿಷ ಕೋಠಿಗಳನ್ನು ಸ್ವಾಧೀನಪಡಿಸಿಕೊಂಡನು. ಇದೇ ಮುಂದೆ ಪ್ಲಾಸಿ ಕದನಕ್ಕೆ ಕಾರಣವಾಯಿತು.

ನವಾಬ್ ಸಿರಾಜ್ ಉದ್ದೌಲನ ದಾಳಿಯ ವಾರ್ತೆ ಕೇಳಿದ ಮದ್ರಾಸಿನ ಕಂಪನಿಯ ಅಧಿಕಾರಿಗಳು ರಾಬರ್ಟ್ ಕ್ಲೈವನ ನೇತೃತ್ವದಲ್ಲಿ ಕಲ್ಕತ್ತಕ್ಕೆ ಸೈನ್ಯ ರವಾನಿಸಿದರು. ಬಂಗಾಲದ ಪರಿಸ್ಥಿತಿಯನ್ನರಿತ ಕ್ಲೈವ್, ನವಾಬನ ವಿರುದ್ಧ ಒಳಸಂಚು ನಡೆಸಿದನು. ಸಿರಾಜನ ಸೇನಾನಿ ಮೀರ್ ಜಾಫರನಿಗೆ ನವಾಬಗಿರಿಯ ಆಸೆಯನ್ನು ತೋರಿಸಿ ರಹಸ್ಯ ಒಪ್ಪಂದ ಮಾಡಿಕೊಂಡನು.

ಬ್ರಿಟಿಷರು ಮತ್ತು ಸಿರಾಜ್ ಉದ್ದೌಲನ ಸೈನ್ಯದ ನಡುವೆ ಪ್ಲಾಸಿ ಎಂಬಲ್ಲಿ ಸಾ. ಶ. 1757 ಜೂನ್ 23 ರಂದು ಯುದ್ಧವಾಯಿತು. ಯುದ್ಧದಲ್ಲಿ ಮೀರ್ ಜಾಫರನು ಬ್ರಿಟಿಷರಿಗೆ ನೆರವಾದನು. ಅಂತಿಮವಾಗಿ ಸಿರಾಜ್ ಉದ್ದೌಲನು ಸೋತು ಕೊಲ್ಲಲ್ಪಟ್ಟನು. ಮೀರ ಜಾಫರನು ಮಾಡಿದ ದ್ರೋಹದಿಂದ ಬ್ರಿಟಿಷರಿಗೆ ಜಯ ಲಭಿಸಿತು. ಬ್ರಿಟಿಷ್ ವಸಾಹತು ಶಾಹಿಯ ಸ್ಥಾಪನೆಯಾಯಿತು.





**ಪರಿಣಾಮಗಳು**

ಆಧುನಿಕ ಭಾರತದ ಚರಿತ್ರೆಯಲ್ಲಿ ಪ್ಲಾಸಿ ಕದನವು ಒಂದು ನಿರ್ಣಾಯಕ ಕದನವಾಗಿದೆ. ಈ ಯುದ್ಧದಲ್ಲಿ ಸಿರಾಜ್ ಉದ್ದೌಲನ ಸೋಲಿನಿಂದ ಆಂಗ್ಲರು ಬಂಗಾಲದ ರಾಜಕೀಯದಲ್ಲಿ ಮಹತ್ವದ ಸ್ಥಾನವನ್ನು ಪಡೆದರು.

1. ಬ್ರಿಟಿಷರ ಕೃಪೆಯಿಂದ ಮೀರ ಜಾಫರ್ ಬಂಗಾಲದ ನವಾಬನಾದನು. ಆದರೆ ಅವನು ಬ್ರಿಟಿಷರ ಕೈಗೊಂಬೆಯಾದನು.
2. ಬ್ರಿಟಿಷ ಈಸ್ಟ್ ಇಂಡಿಯಾ ಕಂಪನಿಯು ಹೇರಳ ಹಣ ಮತ್ತು 24 ಪರಗಣ ಎಂಬ ಜಿಲ್ಲೆಯ ಜಮೀನ್ದಾರಿ ಹಕ್ಕನ್ನು ಪಡೆಯಿತು.
3. ಪ್ಲಾಸಿ ಕದನವು ಮುಂದಿನ ಬಕ್ಸಾರ್ ಕದನಕ್ಕೂ ಕಾರಣವಾಯಿತು.
4. ವ್ಯಾಪಾರಿಗಳಾಗಿ ಬಂದಿದ್ದ ಇಂಗ್ಲಿಷರು ತಕ್ಷಣವೇ ಆಡಳಿತ ನಡೆಸುವ ಅಧಿಕಾರ ಪಡೆದರು.
5. ಪ್ಲಾಸಿ ವಿಜಯವು ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಸ್ಥಾಪನೆಗೆ ನಾಂದಿಯಾಯಿತು.

ನವಾಬನ ಸೇನಾನಿ ಮೀರ್ ಜಾಫರ್ ನವಾಬನಾಗುವ ಆಸೆಯಿಂದ ಇಂಗ್ಲಿಷರೊಡನೆ ಒಪ್ಪಂದ ಮಾಡಿಕೊಂಡನು.ಅದರಂತೆ ನವಾಬನಾದ ಕೂಡಲೇ ಇಂಗ್ಲಿಷರಿಗೆ 175 ಲಕ್ಷ ರೂಪಾಯಿ ಕೊಡಬೇಕಾಗಿತ್ತು. ಈ ಕಪ್ಪು ವ್ಯವಹಾರದಲ್ಲಿ ಅಮೀನಚಂದ್ ಎಂಬ ವರ್ತಕ ಮಧ್ಯಸ್ಥಿಕೆ ವಹಿಸಿದನು.

**ಬಕ್ಸಾರ್ ಕದನ (ಸಾ. ಶ. 1764)**

ಮೀರ್ ಜಾಫರನು ದೀರ್ಘಕಾಲ ಬ್ರಿಟಿಷರ ಕೊನೆ ಇಲ್ಲದ ಬೇಡಿಕೆಗಳನ್ನು ಈಡೇರಿಸುವಲ್ಲಿ ವಿಫಲನಾದನು. ಆಗ ಬ್ರಿಟಿಷರು ಬಂಗಾಳದ ನವಾಬ ಸ್ಥಾನದಿಂದ ಮೀರ್ ಜಾಫರ್‌ನನ್ನು ಪದಚ್ಯುತಗೊಳಿಸಿ ಅವನ ಅಳಿಯನಾದ ಮೀರ್‌ಖಾಸಿಂನನ್ನು ಅಧಿಕಾರಕ್ಕೆ ತಂದರು.

ಕಾರಣ: ಮೀರ್‌ಖಾಸಿಂ ಸ್ವತಂತ್ರ ಮನೋಭಾವದವನಾಗಿದ್ದನು. ಬ್ರಿಟಿಷರು ದುರ್ಬಳಕೆ ಮಾಡಿಕೊಳ್ಳುತ್ತಿದ್ದ ದಸ್ತಕಗಳನ್ನು ಪರಿಶೀಲಿಸಿ ಬಂಗಾಳದ ಎಲ್ಲಾ ವ್ಯಾಪಾರವನ್ನು ಸುಂಕಮುಕ್ತಗೊಳಿಸಿದನು. ಇದರಿಂದ ಭಾರತೀಯ ವರ್ತಕರ ಪೈಪೋಟಿಯನ್ನು ಬ್ರಿಟಿಷರು

ಎದುರಿಸಬೇಕಾಯಿತು. ಆದ್ದರಿಂದ ಮೀರ್ಕಾಸಿಂನನ್ನು ನವಾಬನ ಸ್ಥಾನದಿಂದ ಕಿತ್ತೊಗೆದು ಮತ್ತೆ ಮೀರ್ ಜಾಫರ್‌ನನ್ನು ಅಧಿಕಾರಕ್ಕೆ ತಂದರು.

ಇದರಿಂದ ದೃತಿಗೆಡದ ಮೀರ್ಕಾಸಿಂ ಅವಧ್ ಸಂಸ್ಥಾನದ ನವಾಬ ಷೂಜಾ-ಉದ್‌ದೌಲ ಮತ್ತು ಮೊಗಲ್ ದೊರೆ ಎರಡನೇ ಷಾಆಲಂ ಅವರೊಡನೆ ಸ್ನೇಹ ಬೆಳೆಸಿದನು. ತರುವಾಯ ಅವರ ಸಹಾಯವನ್ನು ಪಡೆದು ಬಂಗಾಳವನ್ನು ಪುನಃ ಸ್ವಾಧೀನಪಡಿಸಿಕೊಳ್ಳಲು ಬ್ರಿಟಿಷರ ಮೇಲೆ ಸಾ. ಶ. 1764 ರಲ್ಲಿ ಯುದ್ಧ ಘೋಷಿಸಿದನು. ಇದೇ ಪ್ರಸಿದ್ಧವಾದ ಬಕ್ಸಾರ್ ಕದನ. ಈ ಕದನದಲ್ಲಿ ಹೆಕ್ಟರ್ ಮನ್ರೋ ನಾಯಕತ್ವದ ಬ್ರಿಟಿಷ್ ಸೇನೆ ಮೀರಕಾಸಿಂನ ಸಂಯುಕ್ತ ಸೇನಾ ಪಡೆಯನ್ನು ಸೋಲಿಸಿತು. ಷೂಜಾ-ಉದ್-ದೌಲ್ ರೋಹಿಲಖಂಡದಲ್ಲಿ ಆಶ್ರಯ ಪಡೆದನು ಎರಡನೇ ಷಾಆಲಂ ಬ್ರಿಟಿಷರೊಂದಿಗೆ ಸೇರಿದನು. ಮೀರ್ಕಾಸಿಂ ಯುದ್ಧ ರಂಗದಿಂದ ಪಲಾಯನ ಮಾಡಿದನು.

**ಪರಿಣಾಮಗಳು**

1. ಮೀರಜಾಫರನು ಮತ್ತೆ ಬಂಗಾಲದ ನವಾಬನಾದನು.
2. ಬಕ್ಸಾರ ಕಾಳಗವು ಬಂಗಾಳದಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ಆಡಳಿತವನ್ನು ಸ್ಥಿರಪಡಿಸಿತು.
3. ಈ ಯುದ್ಧವು ಆಂಗ್ಲರ ಪ್ರಭಾವವನ್ನು ಬಂಗಾಲದಿಂದ ಅಲಹಾಬಾದದವರೆಗೆ ವಿಸ್ತರಿಸಲು ಅವಕಾಶ ಮಾಡಿತು.
4. ಮೊಗಲ್ ದೊರೆ ಎರಡನೇ ಷಾ ಆಲಂನಿಂದ ಬಂಗಾಳ ಪ್ರಾಂತ್ಯದ ದಿವಾನಿ (ಕಂದಾಯ ಸಂಗ್ರಹಿಸುವ) ಹಕ್ಕನ್ನು ಪಡೆದರು.
5. ಸಾ. ಶ. 1765 ರಲ್ಲಿ ಮೀರಜಾಫರನ ಮರಣದ ನಂತರ ನಿಜಾಮ್ ಉದ್ದೌಲನು ಬಂಗಾಳದ ನವಾಬನಾದನು.

## ಕರ್ನಾಟಿಕ್ ಯುದ್ಧಗಳು (ಸಾ. ಶ. 1746-1763)

ಮೊಗಲ್ ಸಾಮ್ರಾಜ್ಯದ ಒಂದು ಪ್ರಾಂತವೇ 'ಕರ್ನಾಟಿಕ್'. ಕೋರಮಂಡಲ ತೀರ (ಈಗಿನ ತಮಿಳುನಾಡು ಹಾಗೂ ಆಂದ್ರಪ್ರದೇಶದ ತೀರ ಪ್ರದೇಶ) ಮತ್ತು ಅದರ ಹಿನ್ನಾಡನ್ನು ಯುರೋಪಿಯನ್ನರು 'ಕರ್ನಾಟಿಕ್' (Carnatic) ಎಂದು ಕರೆಯುತ್ತಿದ್ದರು.

ಬ್ರಿಟಿಷ್ ಮತ್ತು ಫ್ರೆಂಚರ ನಡುವೆ ದಕ್ಷಿಣ ಭಾರತದ ವ್ಯಾಪಾರದ ಮೇಲಿನ ನಿಯಂತ್ರಣಕ್ಕಾಗಿ ಪೈಪೋಟಿ ನಡೆದು ಅಲ್ಪ ಕಾಲದಲ್ಲೇ ಅದು ಕದನದ ಹಾದಿಯನ್ನು ಹಿಡಿಯುವಂತೆ ಮಾಡಿತು. ಈ ಹಿನ್ನಲೆಯಲ್ಲಿ ನಡೆದ ಮೂರು ಕದನಗಳಿಗೆ ಕರ್ನಾಟಿಕ್ ಪ್ರದೇಶ ಮುಖ್ಯ ಭೂಮಿಕೆಯಾಯಿತು. ಆದ್ದರಿಂದ ಈ ಕದನಗಳನ್ನು 'ಕರ್ನಾಟಿಕ್ ಕದನ' ಗಳೆಂದು ಚರಿತ್ರೆಯಲ್ಲಿ ಗುರುತಿಸುತ್ತಾರೆ.

**ಪ್ರಥಮ ಕರ್ನಾಟಿಕ್ ಯುದ್ಧ( ಸಾ. ಶ. 1746-1748)**

ಕಾರಣಗಳು

1. ಭಾರತದಲ್ಲಿ ಆಂಗ್ಲ ಮತ್ತು ಫ್ರೆಂಚರ ನಡುವೆ ವ್ಯವಹಾರಿಕ ಮತ್ಸರ, ಪೈಪೋಟಿ ಮತ್ತು ರಾಜಕೀಯ ಮಹಾದಾಸೆ ಯುದ್ಧಕ್ಕೆ ಕಾರಣವಾಯಿತು.
2. ಯುರೋಪ್ ಖಂಡದಲ್ಲಿ ಆರಂಭವಾಗಿದ್ದ ಆಸ್ಟ್ರೀಯಾದ ಉತ್ತರಾಧಿಕಾರತ್ವದ ಕಾರಣಕ್ಕಾಗಿ ಇಂಗ್ಲೆಂಡ ಮತ್ತು ಫ್ರಾನ್ಸಗಳ ನಡುವೆ ಯುದ್ಧ ಆರಂಭವಾಯಿತು. ಇದು ಭಾರತದಲ್ಲಿ ನೆಲೆಯೂರಿದ ಇವರಿಬ್ಬರ ನಡುವೆ ಯುದ್ಧಕ್ಕೆ ಕಾರಣವಾಯಿತು.

ಆರ್ಕಾಟ್ ಕರ್ನಾಟಿಕ ಸಂಸ್ಥಾನದ ರಾಜಧಾನಿಯಾಗಿತ್ತು. ಇಂಗ್ಲಿಷರು ಆಗ್ನೇಯ ಕರಾವಳಿಯನ್ನು ಗೆದ್ದುಕೊಂಡು ಫ್ರೆಂಚರ ಪಾಂಡಿಚೇರಿಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಇದಕ್ಕೆ ಸೇಡು ತೀರಿಸಿಕೊಳ್ಳಲು ಫ್ರೆಂಚರ ಗವರ್ನರ ಡೂಪ್ಲೆ ಮದ್ರಾಸನ್ನು ವಶಪಡಿಸಿಕೊಂಡನು. ಇಂಗ್ಲಿಷರು ಅರ್ಕಾಟಿನ ನವಾಬ ಅನ್ವರುದ್ದೀನ್‌ನ ಸಹಾಯವನ್ನು ಬೇಡಿದರು. ನವಾಬನು ಮದ್ರಾಸನ್ನು ಪುನಃ ವಶಪಡಿಸಿಕೊಳ್ಳಲು ಕಳುಹಿಸಿದನು. ಆದರೆ ನವಾಬನ ಸೇನೆ ಸೋಲನ್ನು ಅನುಭವಿಸಿತು. ಇಷ್ಟರಲ್ಲಿ ಯುರೋಪಿನಲ್ಲಿ ಇಂಗ್ಲಿಷರು ಮತ್ತು ಫ್ರೆಂಚರ ನಡುವಣ ಯುದ್ಧ ನಿಂತು ಒಪ್ಪಂದ ಏರ್ಪಟ್ಟಿತು. ಈ ಒಪ್ಪಂದ ಭಾರತದಲ್ಲಿದ್ದ ಬ್ರಿಟಿಷರಿಗೂ, ಫ್ರೆಂಚರಿಗೂ ಅನ್ವಯಿಸಿತು.

ಮೊದಲ ಕರ್ನಾಟಿಕ್ ಯುದ್ಧದಲ್ಲಿ ಫ್ರೆಂಚರು ಮೇಲುಗೈ ಸಾಧಿಸಿದರು. ಇದು 'ಏಕ್ಸ್-ಲಾ-ಚಾಪೆಲ್' ಒಪ್ಪಂದದೊಂದಿಗೆ ಅಂತ್ಯಗೊಂಡಿತು.

**ಪರಿಣಾಮಗಳು**

1. ಮದ್ರಾಸ್ ಇಂಗ್ಲೀಷರ ಕೈ ವಶವಾಯಿತು.
2. ಫ್ರೆಂಚರು ಆರ್ಕಾಟ್‌ನಲ್ಲಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡರು.ಇದರಿಂದ ಡೂಪ್ಲೆಯ ಪ್ರತಿಷ್ಠೆಯು ಹೆಚ್ಚಾಯಿತು.
3. ಪರಸ್ಪರ ಯುದ್ಧ ಖೈದಿಗಳನ್ನು ಬಿಡುಗಡೆಮಾಡಲಾಯಿತು.

**ಎರಡನೇ ಕರ್ನಾಟಿಕ್ ಯುದ್ಧ (ಸಾ. ಶ. 1749-1754)**

ಕಾರಣ: ಆರ್ಕಾಟ್ ಮತ್ತು ಹೈದರಾಬಾದ್‌ಗಳಲ್ಲಿ ಪಟ್ಟಾಧಿಕಾರದ ಸಮಸ್ಯೆಗಳು ಉದ್ಭವಿಸಿದವು. ಇದು ಯುದ್ಧಕ್ಕೆಪ್ರಮುಖ ಕಾರಣವಾಯಿತು.

ಆರ್ಕಾಟಿನಲ್ಲಿ ಚಂದಾಸಾಹೇಬ ಮತ್ತು ಅನ್ವರುದ್ದೀನ್ ಹಾಗೂ ಹೈದರಾಬಾದಿನಲ್ಲಿ ನಾಸಿರ್ಜಂಗ್ ಮತ್ತು ಮುಜಾಫರ್ಜಂಗರ ನಡುವೆ ಸಿಂಹಾಸನಕ್ಕಾಗಿ ಪೈಪೋಟಿ ಆರಂಭವಾಯಿತು.

ಗುಪ್ತ ಸಂಧಾನದ ಮೂಲಕ ಡೂಪ್ಲೆಯು ಚಂದಾಸಾಹೇಬ ಮತ್ತು ಮುಜಾಫರಜಂಗ್ ನಡುವೆ ಒಂದು ಕೂಟವನ್ನು ಮಾಡಿಕೊಂಡರು. ಅನ್ವರುದ್ದೀನ್‌ನನ್ನು ಸೋಲಿಸಿ ಕೊಂದು ಹಾಕಿದರು. ಅವನ ಮಗ ಮಹಮದ್‌ಆಲಿ ತಿರುಚನಾಪಳ್ಳಿಗೆ ಓಡಿಹೋದನು.

ಆರ್ಕಾಟಿನಲ್ಲಿ ಚಂದಾಸಾಹೇಬನು, ಹೈದರಬಾದಿನಲ್ಲಿ ಮುಜಾಫರ್ಜಂಗ್ ನವಾಬರಾಗಲು ಫ್ರೆಂಚರು ನೆರವು ನೀಡಿದರು. ಕೆಲಕಾಲದ ನಂತರ ಮುಜಾಫರ್ ಜಂಗ್ ಕೊಲೆಗೀಡಾದನು. ಅವನ ಸ್ಥಾನಕ್ಕೆ ಫ್ರೆಂಚರು ಸಲಾಬತ್ ಜಂಗನನ್ನು ತಂದರು. ಇತ್ತ ಇದರಿಂದ ಕೋಪಗೊಂಡ ಇಂಗ್ಲಿಷರು ರಾಬರ್ಟ್ ಕ್ಲೈವನ ನಾಯಕತ್ವದಲ್ಲಿ ಆರ್ಕಾಟ್ ನಗರವನ್ನು ವಶಪಡಿಸಿಕೊಂಡು ಚಂದಾಸಾಹೇಬನನ್ನು ಕೊಂದರು. ಅಲ್ಲದೆ ಮಹಮದ್ಆಲಿಯನ್ನು ಆರ್ಕಾಟಿನ ನವಾಬನನ್ನಾಗಿ ಮಾಡಿದರು. ಈ ಯುದ್ಧದ ನಂತರ ಡೂಪ್ಲೆಯನ್ನು ಫ್ರೆಂಚ್ ಸರಕಾರವು ವಾಪಸ್ಸು ಕರೆಸಿಕೊಂಡಿತು. 1754 ರ 'ಪಾಂಡಿಚೇರಿ ಒಪ್ಪಂದ' ದೊಂದಿಗೆ ಯುದ್ಧ ಕೊನೆಗೊಂಡಿತು.



ಲಾರ್ಡ್ ವೆಲ್ಲೆಸ್ಲಿ

### ಪರಿಣಾಮಗಳು

1. ಆರ್ಕಾಟಿನಲ್ಲಿ ಫ್ರೆಂಚರ ಶಕ್ತಿ ಪ್ರಭಾವಗಳು ಕುಗ್ಗಿದವು.
2. ಬ್ರಿಟಿಷರು ಕಂದಾಯವನ್ನು ವಸೂಲು ಮಾಡುವ ಹಾಗೂ ಸೇನಾ ತುಕಡಿಗಳನ್ನು ಇರಿಸಿಕೊಳ್ಳುವ ಹಕ್ಕಗಳನ್ನು ಪಡೆದುಕೊಂಡರು.

ಎರಡನೇ ಕರ್ನಾಟಿಕ್ ಯುದ್ಧದ ಕೊನೆಯ ಹೊತ್ತಿಗೆ ಇಂಗ್ಲಿಷರು ಆರ್ಕಾಟಿನಲ್ಲಿಯೂ, ಫ್ರೆಂಚರು ಹೈದರಾಬಾದಿನಲ್ಲಿಯೂ ತಮ್ಮ ಪ್ರಾಬಲ್ಯವನ್ನು ಕಾಯ್ದುಕೊಂಡರು.

### ಮೂರನೇ ಕರ್ನಾಟಿಕ್ ಯುದ್ಧ (ಸಾ. ಶ. 1758-1763)

ಕಾರಣ: ಯುರೋಪಿನಲ್ಲಿ ಸಪ್ತ ವಾರ್ಷಿಕ ಯುದ್ಧ ಸಾ. ಶ. 1756 ರಲ್ಲಿ ಆರಂಭವಾಯಿತು. ಇದರ ಪರಿಣಾಮವಾಗಿ ಭಾರತದಲ್ಲಿಯೂ ಫ್ರೆಂಚ್ ಮತ್ತು ಇಂಗ್ಲಿಷ್ ರ

ನಡುವೆ ಮೂರನೇ ಕರ್ನಾಟಿಕ್ ಯುದ್ಧ ಆರಂಭವಾಯಿತು.

ಸಾ. ಶ. 1760 ರಲ್ಲಿ ಇಂಗ್ಲಿಷ ಸೇನಾನಿ ಸರ್ ಐರ್ಕೂಟನಿಗೂ ಫ್ರೆಂಚರ ಗವರ್ನರ್ ಕೌಂಟ್ ಡಿ ಲಾಲಿಗೂ ಪಾಂಡಿಚೇರಿ ಸಮೀಪ ವಾಂಡಿವಾಷ್ ನಲ್ಲಿ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಫ್ರೆಂಚರಿಗೆ ಸೋಲಾಯಿತು. ಫ್ರೆಂಚರು ಇಂಗ್ಲಿಷರಿಗೆ ಶರಣಾದರು. ಯುರೋಪಿನಲ್ಲಿ ಈ ವೇಳೆಗೆ ಸಪ್ತವಾರ್ಷಿಕ ಯುದ್ಧಗಳು ಕೊನೆಗೊಂಡು ಪ್ಯಾರಿಸ್ ಒಪ್ಪಂದವಾಯಿತು. ಪರಿಣಾಮವಾಗಿ ಕರ್ನಾಟಿಕದಲ್ಲಿಯೂ ಯುದ್ಧ ಮುಕ್ತಾಯವಾಯಿತು.

**ಪರಿಣಾಮಗಳು**

1. ಭಾರತದಲ್ಲಿ ಫ್ರೆಂಚರ ರಾಜಕೀಯ ಮತ್ತು ಸೈನಿಕ ಪ್ರಭಾವವು ಕೊನೆಗೊಂಡಿತು.
2. ಭಾರತದಲ್ಲಿ ಆಂಗ್ಲರು ಯುರೋಪಿನ ಪ್ರಬಲ ಶಕ್ತಿಯಾಗಿ ಹೊರಹೊಮ್ಮಿದರು.

**ಸಹಾಯಕ ಸೈನ್ಯ ಪದ್ಧತಿ (1798)**

ಇಂಗ್ಲಿಷರ ಗವರ್ನರ ಜನರಲ್ ಲಾರ್ಡ್ ವೆಲ್ಲೆಸ್ಲಿಯು ಸಹಾಯಕ ಸೈನ್ಯ ಪದ್ಧತಿಯನ್ನು ಸಾ. ಶ 1798 ರಲ್ಲಿ ಜಾರಿಗೆ ತಂದನು. ಇದು ಬ್ರಿಟಿಷ್ ರಾಜ್ಯದ ವಿಸ್ತರಣೆಗೆ ಹಾಗೂ ಭಾರತದ ಮೇಲಿನ ಬ್ರಿಟಿಷ್ ರಾಜಕೀಯ ನಿಯಂತ್ರಣಕ್ಕೆ ಸಹಾಯಕವಾದ ಒಂದು ಮಹತ್ವದ ಶಾಸನವಾಯಿತು.

ತಮ್ಮ ನೆರೆಯ ರಾಜರಿಂದ ಅಪಾಯ ಉಂಟಾಗದಂತೆ ಬ್ರಿಟಿಷರ ಸೇನಾ ಸಹಾಯ ಪಡೆಯಲು ಭಾರತೀಯ ರಾಜರನ್ನು ಪ್ರೇರೇಪಿಸಿದನು. ಈ ನಿಟ್ಟಿನಲ್ಲಿ ಕೆಲವೊಮ್ಮೆ ಅವರನ್ನು ಬಲವಂತ ಕೂಡಾ ಮಾಡಿದನು.

**ಷರತ್ತುಗಳು (ಕರಾರುಗಳು)**

1. ಈ ಪದ್ಧತಿಯನ್ನು ಒಪ್ಪಿಕೊಂಡ ರಾಜರು ಇಂಗ್ಲಿಷ್ ಸೇನಾ ಪಡೆಯನ್ನು ತಮ್ಮ ರಾಜ್ಯದಲ್ಲಿ ಇಟ್ಟುಕೊಳ್ಳಬೇಕು.
2. ಸೈನ್ಯದ ಖರ್ಚು ವೆಚ್ಚವನ್ನು ನಗದು ರೂಪದಲ್ಲಿ ಬ್ರಿಟಿಷರಿಗೆ ನೀಡಬೇಕು.
3. ಆಸ್ಥಾನದಲ್ಲಿ ಬ್ರಿಟಿಷ್ ರೆಸಿಡೆಂಟ್‌ನನ್ನು ಇಟ್ಟುಕೊಳ್ಳಬೇಕು. ಈತನ ಖರ್ಚನ್ನು ಅವರೇ ನೋಡಿಕೊಳ್ಳಬೇಕಾಗಿತ್ತು.

**ಸಹಾಯಕ ಸೈನ್ಯ ಪದ್ಧತಿಯ ಪರಿಣಾಮಗಳು**

1. ಸೈನಿಕ ವೆಚ್ಚದ ಅಗಾಧ ಹೊರೆಯು ಭಾರತದ ರಾಜ್ಯಗಳನ್ನು ಆರ್ಥಿಕವಾಗಿ ದುರ್ಬಲಗೊಳಿಸಿತು.
2. ಬ್ರಿಟಿಷರು ಭಾರಿ ಭೂಪ್ರದೇಶಗಳನ್ನು ತಮ್ಮ ಹತೋಟಿಗೆ ತೆಗೆದುಕೊಂಡರು.
3. ಈ ನೀತಿಗೆ ಒಳಪಟ್ಟ ರಾಜ್ಯಗಳು ತಮ್ಮ ಪರಮಾಧಿಕಾರವನ್ನೇ ಕಳೆದುಕೊಂಡವು.

ಸಹಾಯಕ ಸೈನ್ಯ ಪದ್ಧತಿಯ ಒಪ್ಪಂದಕ್ಕೆ ಒಳಗಾದ ರಾಜ್ಯಗಳು: ಹೈದರಾಬಾದ್, ಮೈಸೂರು, ತಿರುವಾಂಕೂರು, ಬರೋಡಾ, ಜೈಪುರ, ಜೋಧ್‌ಪುರ, ಭರತ್‌ಪುರ, ನಾಗಪುರ, ಗ್ವಾಲಿಯರ್, ಔದ್, ತಂಜಾವೂರು, ಸೂರತ್ ಮುಂತಾದವುಗಳು.

### ದತ್ತು ಮಕ್ಕಳಿಗೆ ಹಕ್ಕಿಲ್ಲವೆಂಬ ನೀತಿ (1848)

ಬ್ರಿಟಿಷ್ ಗವರ್ನರ ಜನರಲ್ ಲಾರ್ಡ್ ಡಾಲ್ ಹೌಸಿಯು "ದತ್ತು ಮಕ್ಕಳಿಗೆ ಹಕ್ಕಿಲ್ಲ ನೀತಿ'' ಯನ್ನು ಜಾರಿಗೆ ತಂದನು. ಯಾವುದೇ ಭಾರತದ ರಾಜನಿಗೆ ಗಂಡು ಮಕ್ಕಳಿಲ್ಲದಿದ್ದರೆ ದತ್ತು ಪುತ್ರನಿಗೆ ಪಟ್ಟವೇರುವ ಹಕ್ಕಿಲ್ಲವೆಂದು ಘೋಷಿಸಿದನು. ಪುತ್ರ ಸಂತಾನವಿಲ್ಲದೆ ತೀರಿಕೊಂಡ ಅರಸರ ರಾಜ್ಯಗಳು ಬ್ರಿಟಿಷರ ವಶವಾದವು. ದತ್ತು ಸ್ವೀಕಾರವು ಭಾರತದಲ್ಲಿ ಪ್ರಾಚೀನ ಕಾಲದಿಂದ ಆಚರಣೆಯಲ್ಲಿದ್ದು, ಅದು ರೂಢಿಗೆ ವಿರುದ್ಧವಾಗಿತ್ತು.


ಲಾರ್ಡ್ ಡಾಲ್‌ಹೌಸಿ

## ಪರಿಣಾಮಗಳು

1. ಈ ಕುಟಿಲ ನೀತಿಯ ಪರಿಣಾಮವಾಗಿ ಔಧ್, ಸತಾರಾ, ನಾಗಪುರ ಮತ್ತು ಝಾನ್ಸಿ ಮುಂತಾದ ರಾಜ್ಯಗಳು ನೇರವಾಗಿ ಬ್ರಿಟಿಷರ ವಶವಾದವು.
2. ಸಾ. ಶ. 1856 ರಲ್ಲಿ ಡಾಲ್ ಹೌಸಿಯು ತನ್ನ ದೇಶಕ್ಕೆ ಮರುಳುವಾಗ ಭಾರತದ 2/3 (ಮೂರನೇ ಎರಡು) ರಷ್ಟು ಭೂಪ್ರದೇಶವು ಬ್ರಿಟಿಷ್ ಆಳ್ವಿಕೆಗೆ ಒಳಪಟ್ಟಿತು.

## ಕಾಲಗಣನೆ: (ಸಾ. ಶ.)

1. ಪ್ಲಾಸಿ ಕದನ: 1757
2. ಬಕ್ಸಾರ್ ಕದನ: 1764
3. ಕರ್ನಾಟಿಕ್ ಯುದ್ಧಗಳು: 1746 ರಿಂದ 1763

4. ಸಹಾಯಕ ಸೈನ್ಯ ಪದ್ಧತಿ: 1798
5. ದತ್ತು ಮಕ್ಕಳಿಗೆ ಹಕ್ಕಿಲ್ಲ ನೀತಿ: 1848

## ಅಭ್ಯಾಸಗಳು

### I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.

1. ಪ್ಲಾಸಿ ಕದನದ ನಂತರ ಬಂಗಾಳದ ನವಾಬನಾದವನು ________.
2. ಬಕ್ಸಾರ್ ಕದನದಲ್ಲಿ ಭಾಗವಹಿಸಿದ ಮೊಗಲ್ ದೊರೆ ________.
3. ಎರಡನೇ ಕರ್ನಾಟಿಕ್ ಯುದ್ಧವು ________ ಒಪ್ಪಂದದೊಂದಿಗೆ ಕೊನೆಗೊಂಡಿತು.
4. ವಾಂಡಿವಾಷ್ ಕದನ ________ ರಲ್ಲಿ ನಡೆಯಿತು.

### II. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

1. ಬಕ್ಸಾರ್ ಕದನ ಯಾರ ನಡುವೆ ನಡೆಯಿತು?
2. ಕರ್ನಾಟಿಕ್ ಯುದ್ಧಗಳಲ್ಲಿ ಅಂತಿಮವಾಗಿ ಗೆದ್ದವರು ಯಾರು?
3. ಸಹಾಯಕ ಸೈನ್ಯ ಪದ್ಧತಿಯನ್ನು ಯಾರು ಜಾರಿಗೆ ತಂದರು?
4. ದತ್ತು ಮಕ್ಕಳಿಗೆ ಹಕ್ಕಿಲ್ಲ ನೀತಿಯನ್ನು ಯಾರು ಜಾರಿಗೆ ತಂದರು.

### III. ಈ ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿರಿ.

1. ಬಕ್ಸಾರ್ ಕದನದ ಪರಿಣಾಮಗಳು ಯಾವುವು?
2. ಪ್ಲಾಸಿ ಕದನದ ಕಾರಣಗಳು ಯಾವುವು?
3. ಸಹಾಯಕ ಸೈನ್ಯ ಪದ್ಧತಿಯ ಪರಿಣಾಮಗಳನ್ನು ತಿಳಿಸಿರಿ.
4. ದತ್ತು ಮಕ್ಕಳಿಗೆ ಹಕ್ಕಿಲ್ಲ ನೀತಿಗೆ ಒಳಪಟ್ಟ ಭಾರತೀಯ ರಾಜ್ಯಗಳನ್ನು ಹೆಸರಿಸಿ.

## ಪಾಠ-11: ಬ್ರಿಟಿಷ್ ಆಳ್ವಿಕೆಯ ಪರಿಣಾಮ

### ಪಾಠದ ಪರಿಚಯ

ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯು 1600 ರಿಂದ 1757 ರ ತನಕ ಕೇವಲ ಒಂದು ವ್ಯಾಪಾರಿ ಕಂಪನಿಯಾಗಿತ್ತು. ವ್ಯಾಪಾರಿ ಹಿತಾಸಕ್ತಿಯನ್ನು ಹೊತ್ತು ಬಂದ ಬ್ರಿಟಿಷರು ಕ್ರಮೇಣ ರಾಜಕೀಯ ಆಸಕ್ತಿಯನ್ನು ಬೆಳೆಸಿಕೊಂಡರು. ಆರಂಭದಲ್ಲಿ ಭಾರತದ ವಿವಿಧ ರಾಜಕೀಯ ಶಕ್ತಿಗಳಿಗೆ ಮನವಿಗಳನ್ನು ಸಲ್ಲಿಸುತ್ತ ತಮ್ಮ ವ್ಯಾಪಾರಿ ಹಿತಾಸಕ್ತಿಯನ್ನು ಹೆಚ್ಚಿಸಿಕೊಂಡರು. ಕ್ರಮೇಣ ಅವರು ಮನವಿ ಸೂತ್ರದ ಬದಲಿಗೆ ಯುದ್ಧ ಸೂತ್ರವನ್ನು ಅಳವಡಿಸಿದರು. ಇದರಿಂದ ರಾಜಕೀಯವಾಗಿ ಬಲಾಢ್ಯರಾದರು. ಯುದ್ಧಗಳಿಂದ ಪಡೆದ ಭಾರತವನ್ನು ಬೌದ್ಧಿಕವಾಗಿ ತಮ್ಮ ಅಧೀನಕ್ಕೆ ತೆಗೆದುಕೊಳ್ಳುವ ದೂರಗಾಮಿ ಉಪಾಯಗಳನ್ನು ರೂಪಿಸಿದರು. ಅವರ ದೂರಗಾಮಿ ಕನಸನ್ನು ಈಡೇರಿಸಿಕೊಳ್ಳಲು ಆಡಳಿತದ ಸುಧಾರಣೆಗಳನ್ನು ಒಂದು ಸಾಧನಮಾರ್ಗವಾಗಿ ಬಳಸಿಕೊಂಡರು. ರಾಜಕೀಯ, ಅರ್ಥವ್ಯವಸ್ಥೆ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ವಿವಿಧ ಕಾನೂನುಗಳನ್ನು ಜಾರಿಗೊಳಿಸಿದರು. ತಮ್ಮ ಬಹುಮುಖಿ ಹಿತಾಸಕ್ತಿಯೇ ಅವರ ಲೆಕ್ಕಾಚಾರವಾಗಿತ್ತು. ಆದರೆ ಜಾರಿಗೆ ಬಂದ ಕಾನೂನುಗಳನ್ನು 'ಸುಧಾರಣೆ' ಎಂದು ಕರೆದರು. ಆರಂಭದಲ್ಲಿ ಭಾರತೀಯರು ಹಾಗೆಯೇ ನಂಬತೊಡಗಿದರು. ಅವರು ಜಾರಿಗೊಳಿಸಿದ ಸುಧಾರಣೆಗಳಿಂದ ಭಾರತೀಯ ಸಮಾಜದ ಮೇಲೆ ಒಳ್ಳೆಯ ಪರಿಣಾಮಗಳಾಗಿದ್ದರೆ ಅದು ಆಕಸ್ಮಿಕ ಎಂದು ನಾವು ಭಾವಿಸಬಹುದು. ಈ ಅಧ್ಯಾಯದಲ್ಲಿ 'ಸುಧಾರಣೆ' ಗಳಿಗೆ ಸಂಬಂಧಿಸಿದಂತೆ ನಾಲ್ಕು ಕ್ಷೇತ್ರಗಳಲ್ಲಿ ವಿವೇಚನೆ ನಡೆಸಲಾಗಿದೆ. ಕಂದಾಯ, ಇಂಗ್ಲಿಷ್ ಶಿಕ್ಷಣ, ಆರ್ಥಿಕ ಪ್ರಭಾವ ಮತ್ತು ಶಾಸನಾತ್ಮಕ ಬೆಳವಣಿಗೆ ಇವೇ ಆ ನಾಲ್ಕು ಕ್ಷೇತ್ರಗಳು.

### ಸಾಮರ್ಥ್ಯಗಳು

1. ಕಂದಾಯ ವ್ಯವಸ್ಥೆಯಲ್ಲಿ ಜಾರಿಗೆ ತಂದ ಖಾಯಂ ಜಮೀನ್ದಾರಿ ಪದ್ಧತಿ, ಮಹಲ್ವಾರಿ ಪದ್ಧತಿ, ರೈತವಾರಿ ಪದ್ಧತಿಯ ಗುಣಾವಗುಣಗಳನ್ನು ಗುರುತಿಸುವುದು.
2. ಭಾರತಕ್ಕೆ ಪ್ರವೇಶ ಮಾಡಿದ ಇಂಗ್ಲಿಷ್ ಶಿಕ್ಷಣ ಪದ್ಧತಿಯ ಕುರಿತು ಮಾಹಿತಿ ಪಡೆಯುವುದು.
3. ಆರ್ಥಿಕ ಪ್ರಭಾವಗಳನ್ನು ಪಟ್ಟಿಮಾಡುವುದು.
4. ಶಾಸನಾತ್ಮಕ ಬೆಳವಣಿಗೆಗಳನ್ನು ತಿಳಿದುಕೊಳ್ಳುವುದು.

### ಭೂಕಂದಾಯ ನೀತಿ

ಒಂದು ನಿಗದಿತ ಪ್ರಮಾಣದ ಆದಾಯವು ಸರ್ಕಾರದ ಖಜಾನೆಗೆ ಬರುವಂತೆ ಮಾಡುವುದಕ್ಕಾಗಿ ಬ್ರಿಟಿಷರು ಭೂಕಂದಾಯ ನೀತಿಗಳನ್ನು ಜಾರಿಗೆ ತಂದರು. ಅಲ್ಲದೆ, ಭಾರತದಲ್ಲಿ ಯುದ್ಧಗಳ ವೆಚ್ಚವನ್ನು ತುಂಬುವುದಕ್ಕಾಗಿ, ಕೈತುಂಬ ಸಂಬಳ ಪಡೆಯುತ್ತಿದ್ದ

ಸಾವಿರಾರು ಜನ ಬ್ರಿಟಿಷ್ ಸಿಬ್ಬಂದಿಗಳ ವೇತನಕ್ಕಾಗಿ ಹಾಗೂ ಇತರ ಉದ್ದೇಶಗಳಿಗಾಗಿ ಕಂಪನಿಗೆ ಅಗಾಧ ಹಣಕಾಸಿನ ಅವಶ್ಯಕತೆಯಿತ್ತು. ಅದಕ್ಕಾಗಿ ಕಂಪನಿಯು ಭಾರತದ ರೈತರಿಂದ ದುಬಾರಿಯಾದ ಭೂಕರಿದಾಯವನ್ನು ವಸೂಲು ಮಾಡಲಾರಂಭಿಸಿತು.

ಗವರ್ನರ್ ಜನರಲ್ ವಾರನ್ ಹೇಸ್ಟಿಂಗ್ ತನ್ನ ಅಧಿಕಾರಾವಧಿಯಲ್ಲಿ ಕಂದಾಯ ವಸೂಲಿಗಾಗಿ ಹರಾಜು ಮಾಡುವ ವ್ಯವಸ್ಥೆಯನ್ನು ಜಾರಿಗೆ ತಂದನು. ಹರಾಜಿನ ವೇಳೆ ಜಮೀನ್ದಾರರು ಪರಸ್ಪರ ಪೈಪೋಟಿಯಿಂದ ಹೆಚ್ಚು ಮೊತ್ತದ ಕಂದಾಯ ಕೊಡಲು ಒಪ್ಪಿದರೂ ನಂತರ ವಸೂಲಿಯಲ್ಲಿ ವಿಫಲರಾಗುತ್ತಿದ್ದರು. ಹೀಗೆ ಕಂದಾಯದ ಪ್ರಮಾಣವು ಏರುಪೇರಾಗುತ್ತಿತ್ತು. ತಮ್ಮ ಸಮಸ್ಯೆಗೆ ಪರಿಹಾರವಾಗಿ ಬ್ರಿಟಿಷರು ಇನ್ನಿತರ ಮೂರು ರೀತಿಯ ಕಂದಾಯ ಪದ್ಧತಿಗಳನ್ನು ಜಾರಿಗೆ ತಂದರು.

1. **ಖಾಯಂ ಜಮೀನ್ದಾರಿ ಪದ್ಧತಿ (ಸಾ. ಶ. 1793)**



ಗವರ್ನರ್ ಜನರಲ್ ಕಾರ್ನ್‌ವಾಲೀಸನು ಬಂಗಾಳ, ಬಿಹಾರ, ಒರಿಸ್ಸಾಗಳಲ್ಲಿ ಭೂಕಂದಾಯವನ್ನು ಖಾಯಂ ನೆಲೆಯಲ್ಲಿ ನಿಗದಿಪಡಿಸಲು ನಿರ್ಧರಿಸಿದನು. ಕಂದಾಯ ಸಂಗ್ರಹಕ್ಕೆ ಸಂಬಂಧಿಸಿದಂತೆ, ಅವನು ಜಮೀನ್ದಾರರೊಡನೆ ಮಾಡಿಕೊಂಡ ಒಪ್ಪಂದವನ್ನು ಖಾಯಂ ಜಮೀನಾರಿ ಪದ್ಧತಿ ಎನ್ನುವರು. ಖಾಯಂ ಜಮೀನಾರಿ ಪದ್ಧತಿಯಡಿಯಲ್ಲಿ ಜಮೀನ್ದಾರರು ಬ್ರಿಟಿಷ್ ಸರ್ಕಾರದ ಏಜೆಂಟರಂತೆ ಕಾರ್ಯ ನಿರ್ವಹಿಸಿದರು. ಕಂಪನಿಯ ಗೇಣಿ ಪಾಲು ಖಾಯಂ ಆಗಿ ನಿಗಧಿಯಾಗಿತ್ತು. ಆದುದರಿಂದ ಸರ್ಕಾರಕ್ಕೆ ನಿರ್ದಿಷ್ಟ ಪ್ರಮಾಣದ ಆದಾಯ ಬರುವಂತಾಯಿತು. ಕಂದಾಯ ವಸೂಲಿಗಾಗಿ ಸರ್ಕಾರ ಮಾಡುವ ವೆಚ್ಚ ಕಡಿಮೆಯಾಯಿತು. ಭೂಮಾಲೀಕರಾದ ಪ್ರಬಲ ಜಮೀನಾರರು ಅನೇಕ ಕಠಿಣ ಸಂದರ್ಭಗಳಲ್ಲಿ ಸರ್ಕಾರಕ್ಕೆ ಬೆಂಬಲ ನೀಡಿದರು. ತಮ್ಮನ್ನು ಬೆಂಬಲಿಸಲು ಮತ್ತು ಸಮರ್ಥಿಸಲು ಇಂತಹ ಅನೇಕ ಹೊಸ ವರ್ಗಗಳನ್ನು ಬ್ರಿಟಿಷರು ಸೃಷ್ಟಿಮಾಡಿದರು.

ರೈತರ ಮೇಲೆ ಪರಿಣಾಮ: ಅಧಿಕವಾದ ಕಂದಾಯ ಸಂಗ್ರಹಿಸುವ ಮೂಲಕ ಜಮೀನ್ದಾರರು ಕೃಷಿಕರ ಮೇಲೆ ದಬ್ಬಾಳಿಕೆ ನಡೆಸಿದರು. ಭೂಮಾಲೀಕರು ಕೃಷಿ ಉತ್ಪಾದನೆಯನ್ನು ಹೆಚ್ಚಿಸುವಲ್ಲಿ ಯಾವುದೇ ಆಸಕ್ತಿವಹಿಸಲಿಲ್ಲ. ಬೆಳೆನಾಶವಾಗಿದ್ದರೂ ರೈತರು

ಗೇಣಿಯನ್ನು ಪಾವತಿಸಬೇಕಿತ್ತು. ಒಟ್ಟಿನಲ್ಲಿ ಖಾಯಂ ಜಮೀನ್ದಾರಿ ಪದ್ಧತಿಯಿಂದ ಕೃಷಿರಂಗ ಕುಸಿಯಿತು. ತಮ್ಮ ಕೈಗಾರಿಕೆಗಳಿಗೆ ಬೇಕಾದ ವಾಣಿಜ್ಯ ಬೆಳೆಗಳನ್ನು ಬೆಳೆಯಲು ರೈತರನ್ನು ಒತ್ತಾಯಿಸುವ ಮೂಲಕ ರೈತರನ್ನು ಮತ್ತಷ್ಟು ಬಡವರನ್ನಾಗಿಸಿದರು. ಈ ಕಾರಣದಿಂದ ಜೀತಪದ್ಧತಿಯು ತೀವ್ರವಾಗಿ ಬೆಳೆಯಿತು.

**2. ರೈತವಾರಿ ಪದ್ಧತಿ (ಸಾ. ಶ. 1820):**

ಮಧ್ಯವರ್ತಿಗಳ ಸಹಾಯವಿಲ್ಲದೆ ರೈತನೇ ನೇರವಾಗಿ ಸರ್ಕಾರಕ್ಕೆ ಕಂದಾಯ ಸಂದಾಯ ಮಾಡುತ್ತಿದ್ದುದೇ ರೈತವಾರಿ ಪದ್ಧತಿಯಾಗಿದೆ. ಸರ್ಕಾರ ಮತ್ತು ಸಾಗುವಳಿದಾರನ ನಡುವಿನ ನೇರ ಸಂಬಂಧವೇ ರೈತವಾರಿ ಪದ್ಧತಿಯ ಮುಖ್ಯ ಲಕ್ಷಣವಾಗಿದೆ. ಈ ಪದ್ಧತಿಯನ್ನು ದಕ್ಷಿಣ ಮತ್ತು ಪಶ್ಚಿಮ ಭಾರತದಲ್ಲಿ ಜಾರಿಗೆ ತರಲಾಯಿತು. ಪರಿಣಾಮದಲ್ಲಿ ಇದು ಖಾಯಂ ಜಮೀನ್ದಾರಿ ಪದ್ಧತಿಗಿಂತ ಭಿನ್ನವಾಗಿರಲಿಲ್ಲ.

ರೈತವಾರಿ ಪದ್ಧತಿಯಡಿ ಭೂಮಿಯನ್ನು ಅಳತೆಮಾಡಿ, ಭೂಮಿಯ ಫಲವತ್ತತೆ, ನೀರಾವರಿ ಅನುಕೂಲತೆಗಳನ್ನು ಗಮನಿಸಿ ಕಂದಾಯವನ್ನು ನಿಗಧಿ ಮಾಡಲಾಯಿತು. ಉತ್ಪನ್ನದ ಅರ್ಧಭಾಗವನ್ನು ಕಂದಾಯವಾಗಿ ನೀಡಬೇಕಾಗಿತ್ತು. ಕಾಲಕಾಲಕ್ಕೆ ಕಂದಾಯವನ್ನು ನಿರ್ಣಯಿಸಲಾಗುತ್ತಿತ್ತು. ನಿಗಧಿಪಡಿಸಿದ ಭೂಕಂದಾಯವು ವಿಪರೀತ ಹೆಚ್ಚಾಗಿರುತ್ತಿತ್ತು. ಕ್ಷಾಮ ಅಥವಾ ಪ್ರವಾಹದಿಂದ ಬೆಳೆ ಪೂರ್ಣವಾಗಿ ಹಾನಿಗೀಡಾದರೂ ರೈತರು ಕಂದಾಯವನ್ನು ತಪ್ಪದೆ ಪಾವತಿಸಬೇಕಾಯಿತು. ಈ ಪದ್ಧತಿಯನ್ನು ಮದ್ರಾಸ್ ಪ್ರಾಂತ್ಯದಾದ್ಯಂತ ಸರ್ ಥಾಮಸ್ ಮನ್ರೊ ಅವರು 1820 ರಲ್ಲಿ ಜಾರಿಗೆ ತಂದರು.

**3. ಮಹಲ್ವಾರಿ ಪದ್ಧತಿ (ಸಾ. ಶ. 1833):**

ಮಹಲ್ ಎಂದರೆ ಗ್ರಾಮ ಅಥವಾ ಎಸ್ಟೇಟ್ ಎಂದರ್ಥ. ಮಹಲ್‌ಗೆ ಭೂಕಂದಾಯವನ್ನು ನಿಗಧಿಪಡಿಸಲಾಗುತ್ತಿತ್ತು. ಸ್ಥಳೀಯ ಜಮೀನ್ದಾರನು ಎಲ್ಲ ರೈತರ ಭೂಕಂದಾಯಕ್ಕೆ ಹೊಣೆಗಾರನಾಗಿರುತ್ತಿದ್ದನು. 19 ನೇ ಶತಮಾನದಲ್ಲಿ ಜಾರಿಗೆ ಬಂದ ಈ ಪದ್ಧತಿಯನ್ನು ಉತ್ತರ ಪ್ರದೇಶ, ಮಧ್ಯ ಪ್ರದೇಶದ ಕೆಲವು ಭಾಗಗಳು ಮತ್ತು ಪಂಜಾಬಿನಲ್ಲಿ ಜಾರಿಗೆ ತರಲಾಯಿತು.

**ಭೂಕಂದಾಯ ಪದ್ಧತಿಗಳ ಒಟ್ಟು ಪರಿಣಾಮಗಳು**

1. ಜಮೀನನ್ನು ಮಾರಾಟದ ವಸ್ತುವನ್ನಾಗಿ ಬ್ರಿಟಿಷರು ಪರಿವರ್ತಿಸಿದರು.
2. ಜಮೀನಿನ ಹರಾಜು ಮತ್ತು ಮಾರಾಟ ಪ್ರಕರಣಗಳು ಹೆಚ್ಚಿದವು. ಭೂಕಂದಾಯವನ್ನು ನಗದು ರೂಪದಲ್ಲಿ ನೀಡಬೇಕಾದ ಕಾರಣ ಹಣದ ಮಹತ್ವ ಹೆಚ್ಚಾಯಿತು.
3. ಆದಾಯವನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಜಮೀನ್ದಾರರು ಆಹಾರ ಧಾನ್ಯಗಳಿಗೆ ಬದಲಾಗಿ ಹತ್ತಿ, ಸೆಣಬು, ನೆಲಗಡಲೆ, ತಂಬಾಕು, ಕಬ್ಬಿನಂತಹ ವಾಣಿಜ್ಯ ಬೆಳೆಗಳನ್ನು ಬೆಳೆಯಲು ರೈತರನ್ನು ಒತ್ತಾಯಿಸಿದರು. ವಾಣಿಜ್ಯ ಬೆಳೆಗಳು ರಫ್ತು ಮಾಡಲು ಯೋಗ್ಯವಾಗಿದ್ದು ಆ ಮೂಲಕ ಬ್ರಿಟಿಷರಿಗೆ ಲಾಭದಾಯಕವೆನಿಸಿತು. ಇದರ ಫಲವಾಗಿ ಆಹಾರ ವಸ್ತುಗಳ ಕೊರತೆ ತಲೆದೋರಿತು.

ಜಮೀನ್ದಾರಿ ಪದ್ಧತಿಯಲ್ಲೇ ಅನೇಕ ಹೊಸ ರೈತ ವರ್ಗಗಳು ಹುಟ್ಟಿಕೊಂಡವು.

## ಇಂಗ್ಲೀಷ್ ಶಿಕ್ಷಣ

ಶಿಕ್ಷಣವು ಪ್ರತಿ ವ್ಯಕ್ತಿಯನ್ನು ಸ್ವತಂತ್ರನನ್ನಾಗಿಸುವ ಸಾಧನ. ಶಿಕ್ಷಣದ ಮೂಲಕ ದೊರೆಯುವ ಅರಿವಿನಿಂದ ಬದುಕನ್ನು ಸುಮಧುರವಾಗಿ ರೂಪಿಸಿಕೊಳ್ಳಲು ಸಾಧ್ಯವಾಗುತ್ತದೆ. ಬ್ರಿಟಿಷರು ಇಂಗ್ಲಿಷ್ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಿದ್ದರಿಂದ ಭಾರತೀಯರೂ ಅದರ ಲಾಭವನ್ನು ಪಡೆದರು. ಎಲ್ಲ ವರ್ಗದವರಿಗೂ ಶಿಕ್ಷಣ ದೊರೆಯುವಂತಾಯಿತು.

1813 ರ ಚಾರ್ಟರ್ ಕಾಯ್ದೆಯಲ್ಲಿ ಭಾರತೀಯರ ಶಿಕ್ಷಣಕ್ಕಾಗಿ ಒಂದು ಲಕ್ಷ ರೂಪಾಯಿಗಳನ್ನು ಮೀಸಲಿಡಲಾಯಿತು. ಆದರೆ ಈ ಹಣದಲ್ಲಿ ಸರ್ಕಾರವು 1823 ರ ತನಕ ಒಂದು ರೂಪಾಯಿಯನ್ನು ಸಹ ಶಿಕ್ಷಣಕ್ಕಾಗಿ ಖರ್ಚು ಮಾಡಿರಲಿಲ್ಲ. ಭಾರತೀಯ ಚಿಂತಕರು ಮತ್ತು ವಿದೇಶಿ ಕ್ರೈಸ್ತ ಮತಪ್ರಚಾರಕರು ಆಧುನಿಕ ಶಿಕ್ಷಣ ನೀಡಿಕೆಯ ಪರವಾಗಿ ಚಳವಳಿ ನಡೆಸಿದರು. ಈ ನಿಟ್ಟಿನಲ್ಲಿ ಕಂಪನಿಯ ಲೆಕ್ಕಾಚಾರ ಭಿನ್ನವಾಗಿತ್ತು. ತನ್ನ ಆಡಳಿತದಲ್ಲಿ ಕೆಳ ಹಂತದ ಸರ್ಕಾರಿ ನೌಕರರಾಗಿ ಕೆಲಸ ಮಾಡಲು ಅದಕ್ಕೆ ಇಂಗ್ಲಿಷ್ ಬಲ್ಲ ಭಾರತೀಯರು ಕಡಿಮೆ ವೇತನದಲ್ಲಿ ಬೇಕಾಗಿದ್ದರು. ತಮಗೆ ನಿಷ್ಠರಾಗಿರುವ ಭಾರತೀಯ ವಿದ್ಯಾವಂತ ವರ್ಗವನ್ನು ಸೃಷ್ಟಿಸುವುದು ಅವರ ಉದ್ದೇಶವಾಗಿತ್ತು. ಹೊಸ ಶಿಕ್ಷಣ ನೀತಿಯನ್ನು ಜಾರಿಗೊಳಿಸಿದ ಕೀರ್ತಿ ಲಾರ್ಡ್ ಮೆಕಾಲೆ ಮತ್ತು ಚಾರ್ಲ್ಸ್ ವುಡ್ ಅವರಿಗೆ ಸಲ್ಲಬೇಕು.





## ಶಿಕ್ಷಣ ಮಾಧ್ಯಮದ ಬಗೆಗಿನ ವಿವಾದ

ಶಿಕ್ಷಣ ಮಾಧ್ಯಮಕ್ಕೆ ಸಂಬಂಧಿಸಿದಂತೆ ಕೆಲವು ಆಂಗ್ಲ ವಿದ್ವಾಂಸರು ಭಾರತೀಯ ಭಾಷೆಗಳ ಮೂಲಕ ಭಾರತೀಯ ವಿಷಯಗಳನ್ನು ಕಲಿಸಬೇಕೆಂದು ವಾದಿಸಿದರು. ಇನ್ನು ಕೆಲವರು ಪಾಶ್ಚಾತ್ಯ ವಿಜ್ಞಾನ ಮತ್ತು ಸಾಹಿತ್ಯವನ್ನು ಇಂಗ್ಲಿಷ್ ಭಾಷೆಯಲ್ಲಿ ನೀಡಬೇಕೆಂದು ವಾದಿಸಿದರು. ವಿವಾದವು ಅಂತಿಮವಾಗಿ ಪರಿಹಾರ ಕಂಡ ನಂತರ (1835 ರಲ್ಲಿ), ಗವರ್ನರ್ ಜನರಲ್ ವಿಲಿಯಂ ಬೆಂಟಿಂಕನು ಪಾಶ್ಚಾತ್ಯ ವಿಜ್ಞಾನ ಮತ್ತು ಇಂಗ್ಲಿಷ್ ಮಾಧ್ಯಮದ ಪರವಾಗಿ ಶಿಕ್ಷಣ ನೀತಿಯನ್ನು ಘೋಷಿಸಿದನು.

1854 ರಲ್ಲಿ ಬ್ರಿಟಿಷರು ಹೊಸ ಶಿಕ್ಷಣ ನೀತಿಯನ್ನು ರೂಪಿಸಿದರು. ಇದು ಚಾರ್ಲ್ಸ್ ವುಡ್ ವರದಿಯನ್ನು ಆಧರಿಸಿತ್ತು. ಅಲ್ಪಕಾಲದಲ್ಲೇ ಕಲ್ಕತ್ತ, ಮುಂಬೈ ಮತ್ತು ಮದ್ರಾಸುಗಳಲ್ಲಿ ವಿಶ್ವವಿದ್ಯಾಲಯಗಳನ್ನು (1857) ಸ್ಥಾಪನೆ ಮಾಡಲಾಯಿತು. ಪ್ರಾಥಮಿಕ ಶಾಲೆ, ಪ್ರೌಢಶಾಲೆ, ಕಾಲೇಜು, ವಿಶ್ವವಿದ್ಯಾಲಯ ಹೀಗೆ ಹಂತಹಂತವಾಗಿ ಶಿಕ್ಷಣ ವ್ಯವಸ್ಥೆ ಜಾರಿಗೆ ಬಂತು. ಶಿಕ್ಷಣ ಕ್ಷೇತ್ರದ ಮೇಲ್ವಿಚಾರಣೆಗಾಗಿ ಶಿಕ್ಷಣ ಇಲಾಖೆಗಳನ್ನು ಪ್ರಾಂತಗಳಲ್ಲಿ ರಚಿಸಲಾಯಿತು. 1844 ರಲ್ಲಿ ಇಂಗ್ಲಿಷ್ ಭಾಷೆಯು ಆಡಳಿತದ ಅಧಿಕೃತ ಭಾಷೆಯಾಯಿತು.

ಕೆಲವು ಐರೋಪ್ಯ ವಿದ್ವಾಂಸರು ಪ್ರಾಚೀನ ಭಾರತದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಪಶ್ಚಿಮದ ಜಗತ್ತಿಗೆ ಪರಿಚಯಿಸಿದರು. 1784 ರಲ್ಲಿ ಸುಪ್ರೀಂ ಕೋರ್ಟ್ ನ್ಯಾಯಾಧೀಶನಾಗಿ ಬಂದ ಸರ್ ವಿಲಿಯಂ ಜೋನ್ಸನು ಕಲ್ಕತ್ತದಲ್ಲಿ 'ಏಷಿಯಾಟಿಕ್ ಸೊಸೈಟಿ ಆಫ್ ಬೆಂಗಾಲ್' ಸ್ಥಾಪಿಸಿದನು. ಸಂಸ್ಕೃತ ಭಾಷೆಯ ಹಿರಿಮೆಯನ್ನು ಸಾರಿದನು. ಸರ್ ಚಾರ್ಲ್ಸ್ ವಿಲ್ಕಿನ್ 1785 ರಲ್ಲಿ ಭಗವದ್ಗೀತೆಯನ್ನು ಇಂಗ್ಲಿಷಿಗೆ ಭಾಷಾಂತರಿಸಿದನು. ಮ್ಯಾಕ್ಸ್ ಮುಲ್ಲರ್ ಋಗ್ವೇದ ಮತ್ತು ಇತರ ಕೃತಿಗಳನ್ನು ಭಾಷಾಂತರಿಸಿದನು.

ಬೆಂಟಿಂಕನ ಶಿಕ್ಷಣ ನೀತಿಯ ಘೋಷಣೆಗೆ ಆತನ ಕಾರ್ಯಕಾರಿ ಸಮಿತಿಯ ಸದಸ್ಯನಾಗಿದ್ದ ಮೆಕಾಲೆಯ ಟಿಪ್ಪಣಿ ಆಧಾರವಾಗಿತ್ತು. ಮೆಕಾಲೆ ಓರ್ವ ಕಟ್ಟಾ ಆಂಗ್ಲವಾದಿಯಾಗಿದ್ದನು. ಭಾರತೀಯ ಜ್ಞಾನವು ಕೀಳುಮಟ್ಟದ್ದೆಂದು ಆತನ ವಾದ. ಸಂಸ್ಕೃತ ವ್ಯಾಕರಣವನ್ನು ಆತ ಕಟುವಾಗಿ ಅಪಹಾಸ್ಯ ಮಾಡಿದನು. ಭಾರತೀಯರನ್ನು ಅವರ ಸಾಂಸ್ಕೃತಿಕ ಬೇರುಗಳಿಂದ ದೂರಮಾಡುವುದು ಅವನ ಅಂತಿಮ ಗುರಿಯಾಗಿತ್ತು. "ಒಂದು ಒಳ್ಳೆಯ ಐರೋಪ್ಯ ಗ್ರಂಥಾಲಯದ ಒಂದು ಕಪಾಟಿನ ಒಂದು ಸಾಲಿನ ಪುಸ್ತಕಗಳಿಗೆ ಇಡೀ ಪೂರ್ವದ ಜ್ಞಾನ ಭಂಡಾರ ಸರಿಸಾಟಿಯಲ್ಲ" ಎನ್ನುವ ಅವನ ಮಾತುಗಳು ಅವನಲ್ಲಿನ ಪೂರ್ವಾಗ್ರಹವನ್ನು ತೋರಿಸುತ್ತದೆ.





**ಪಾಶ್ಚಾತ್ಯ ಶಿಕ್ಷಣದ ಪರಿಣಾಮ**

ಪರಂಪರಾನುಗತ ಶಿಕ್ಷಣ ಪದ್ಧತಿಯು ಕ್ರಮೇಣ ಅವನತಿಯ ಹಾದಿ ಹಿಡಿಯಿತು. ಹೊಸ ಶಿಕ್ಷಣ ಕ್ರಮದಿಂದ ವಿವಿಧ ಭಾಷಿಕ ಭಾರತೀಯರು ಇಂಗ್ಲಿಷ್ ಭಾಷೆಯಲ್ಲಿ ಪರಸ್ಪರ ಸಂವಾದಿಸಲು ಸಾಧ್ಯವಾಯಿತು. ಇದು ರಾಷ್ಟ್ರೀಯತೆಯ ಭಾವನೆಗಳನ್ನು ಜನರಲ್ಲಿ ಬೆಳೆಸಲು ಸಹಕಾರಿಯಾಯಿತು. ಯುರೋಪಿನ ಬೌದ್ಧಿಕ ಚಿಂತನೆಗಳು ಕ್ರಮೇಣ ಭಾರತೀಯ ಸಮಾಜವನ್ನು ಪ್ರವೇಶಿಸಿ ದೂರಗಾಮಿ ಪರಿಣಾಮಗಳನ್ನುಂಟು ಮಾಡಿದವು. ಭಾರತೀಯ ಸಾಹಿತ್ಯದ ಮೇಲೂ ಗಂಭೀರ ಪರಿಣಾಮವನ್ನುಂಟು ಮಾಡಿ ಹೊಸ ಸಾಹಿತ್ಯಕ ಚಳವಳಿಗಳಿಗೆ ಈ ಶಿಕ್ಷಣ ಪದ್ಧತಿ ಕಾರಣವಾಯಿತು. ಇದರಿಂದ ಅನೇಕ ವರ್ಗಗಳು ಹೊಸ ಸಾಮಾಜಿಕ ಎಚ್ಚರವನ್ನು ಪಡೆದವು.

**ಆರ್ಥಿಕ ಪ್ರಭಾವ**

18 ಮತ್ತು 19 ನೇ ಶತಮಾನದಲ್ಲಾದ ಇಂಗ್ಲೆಂಡಿನ ಕೈಗಾರಿಕಾ ಕ್ರಾಂತಿಯು ಭಾರತದ ವ್ಯಾಪಾರ ಮತ್ತು ವಾಣಿಜ್ಯದ ಮೇಲೆ ಗಂಭೀರ ಪರಿಣಾಮಗಳನ್ನುಂಟು ಮಾಡಿತು. 1600 ರಿಂದ 1757 ರ ತನಕ ಕಂಪನಿಯು ಕೇವಲ ಒಂದು ವ್ಯಾಪಾರಿ ಕಂಪನಿಯಾಗಿತ್ತು. ಪ್ಲಾಸಿ ಕದನದ ಬಳಿಕ ಅದು ಭಾರತದ ವ್ಯಾಪಾರ ಮತ್ತು ಉತ್ಪಾದನೆಯ ಮೇಲೆ ಏಕಸ್ವಾಮ್ಯವನ್ನು ಸಾಧಿಸುವುದಕ್ಕೆ ಬಂಗಾಲದಲ್ಲಿನ ತನ್ನ ರಾಜಕೀಯ ಅಧಿಕಾರವನ್ನು ಚೆನ್ನಾಗಿ ಬಳಸಿಕೊಂಡಿತು. ಅದೇ ವೇಳೆ ಕಚ್ಚಾಹತ್ತಿಯ ಮಾರಾಟದ ಮೇಲೂ ಅದು ಏಕಸ್ವಾಮ್ಯ ಸ್ಥಾಪಿಸಿತು. ಇದರ ಪರಿಣಾಮವಾಗಿ ನೇಕಾರರು ಕಚ್ಚಾವಸ್ತುವನ್ನು ದುಬಾರಿ ಬೆಲೆಗೆ ಕೊಳ್ಳುವಂತಾಯಿತು. ಒಟ್ಟಿನಲ್ಲಿ ಬ್ರಿಟಿಷ್ ವಾಣಿಜ್ಯ ನೀತಿಯ ಗುರಿ ಬ್ರಿಟಿಷ್ ಕೈಗಾರಿಕೆಯ ಅವಶ್ಯಕತೆಯನ್ನು ಪೂರೈಸುವುದಲ್ಲದೆ ಬೇರೇನೂ ಆಗಿರಲಿಲ್ಲ. ಭಾರತವು ಬ್ರಿಟನ್ನಿನ ಯಂತ್ರನಿರ್ಮಿತ ಸರಕುಗಳ ಆಮದುದಾರ ಮತ್ತು ಬ್ರಿಟನಿಗೆ ಬೇಕಾದ ಕಚ್ಚಾವಸ್ತುಗಳ ರಫ್ತುದಾರ ಆಗಬೇಕೆಂಬುದಷ್ಟೇ ಅದರ ಮುಖ್ಯ ಗುರಿಯಾಗಿತ್ತು. ಮುಕ್ತ ವ್ಯಾಪಾರ ನೀತಿಯನ್ನು ಜಾರಿಗೊಳಿಸುವ ಮೂಲಕ ಭಾರತದ ಗುಡಿ ಕೈಗಾರಿಕೆಗಳನ್ನು ಅವನತಿಯತ್ತ ದೂಡಿತು.

ಬ್ರಿಟಿಷ್ ಆಳ್ವಿಕೆಯ ವೇಳೆ ಭಾರತವು ಬಡ ರಾಷ್ಟ್ರವಾಗಿ ಮಾರ್ಪಾಡುಗೊಳ್ಳಲು ಮುಖ್ಯ ಕಾರಣವೆಂದರೆ ದೇಶದ ಸಂಪತ್ತು ಇಂಗ್ಲೆಂಡಿಗೆ ಹರಿದು ಹೋದದ್ದು. ದಾದಾಬಾಯಿ ನವರೋಜಿಯವರು ಹೇಳುವಂತೆ ಸಂಪತ್ತಿನ ಸೋರಿಕೆಯೇ (Drain of wealth) ಇದಕ್ಕೆ

ಮುಖ್ಯ ಕಾರಣವಾಗಿತ್ತು. ಭಾರತದಲ್ಲಿನ ಬ್ರಿಟಿಷ್ ನಾಗರಿಕರು ವಿವಿಧ ಕ್ಷೇತ್ರಗಳಲ್ಲಿ ಬಂಡವಾಳ ಹೂಡಿ ಗಳಿಸಿದ ಲಾಭವು ಸಂಪತ್ತಿನ ಸೋರಿಕೆಯ ಇನ್ನೊಂದು ಪ್ರಮುಖ ಮೂಲವಾಗಿತ್ತು.

ಸಂಪತ್ತಿನ ಸೋರಿಕೆಯ ಪರಿಣಾಮವಾಗಿ ಭಾರತ ಬಡ ರಾಷ್ಟ್ರವಾಯಿತಲ್ಲದೆ ದೇಶದಲ್ಲಿ ಬಂಡವಾಳದ ಕೊರತೆ ಉಂಟಾಯಿತು. ಇದರಿಂದ ಇಲ್ಲಿನ ಕೈಗಾರಿಕಾ ಅಭಿವೃದ್ಧಿಗೆ ಅಡ್ಡಿಯಾಯಿತು. 'ಅರ್ಥಶಾಸ್ತ್ರದ ಪಿತಾಮಹ' ಆಡಂಸ್ಮಿತ್ ಭಾರತದಲ್ಲಿ ಆಳ್ವಿಕೆ ನಡೆಸುತ್ತಿದ್ದ ಬ್ರಿಟಿಷರನ್ನು 'ಸುಲಿಗೆಕೋರರು' ಎಂದು ಬಣ್ಣಿಸಿದ್ದಾನೆ.



## ಶಾಸನಾತ್ಮಕ ಬೆಳವಣಿಗೆ

### ರೆಗ್ಯುಲೇಟಿಂಗ್ ಕಾಯ್ದೆ (ಸಾ. ಶ. 1773)



ವಾರನ್‌ಹೇಸ್ಟಿಂಗ್ಸ್

ಭಾರತದ ಸಂವಿಧಾನ ಸುಧಾರಣೆಗಳು ಬ್ರಿಟಿಷರ ಆಡಳಿತ ಕಾಲದಿಂದ ಆರಂಭವಾಯಿತೆನ್ನಬಹುದು. ಈ ದೇಶದ ಸಂವಿಧಾನ ಇತಿಹಾಸದಲ್ಲಿ ರೆಗ್ಯುಲೇಟಿಂಗ್ ಕಾಯ್ದೆ ಒಂದು ಪ್ರಮುಖ ಕಾಲ ಘಟ್ಟ. ಭಾರತದಲ್ಲಿ ಗೌರ್ನರ್ ಜನರಲ್ ವಾರನ್ ಹೇಸ್ಟಿಂಗ್ ಈ ಶಾಸನವನ್ನು 1773 ರಲ್ಲಿ ಜಾರಿಗೆ ತಂದನು. ಭಾರತದಲ್ಲಿ ಬ್ರಿಟಿಷರ ಆಡಳಿತಕ್ಕೆ ಈ ಶಾಸನವೇ ಅಡಿಗಲ್ಲಾಯಿತು. ಅದು ಈಸ್ಟ್ ಇಂಡಿಯಾ ಕಂಪನಿಗೆ ಸಂವಿಧಾನವನ್ನು ಒದಗಿಸಿಕೊಟ್ಟಿತು.

**ಪಿಟ್ ಇಂಡಿಯಾ ಕಾಯ್ದೆ (ಸಾ. ಶ. 1784)**

ಭಾರತದ ಅಡಳಿತ ಕ್ರಮದ ಬಗೆಗೆ ಇಂಗ್ಲೆಂಡಿನ ಸರ್ಕಾರಕ್ಕೆ ತೃಪ್ತಿಯಿರಲಿಲ್ಲ. ಅದರ ಕಡೆ ಇನ್ನೂ ಹೆಚ್ಚಿನ ಗಮನ ಕೊಡಬೇಕೆಂದು ನಿರ್ಧರಿಸಿತು. ಅದುದರಿಂದ ಪ್ರಧಾನಮಂತ್ರಿ ಪಿಟ್ ಒಂದು ಕಾಯ್ದೆಯನ್ನು ತಂದರು. ಈ ಕಾಯ್ದೆಯು ಈಸ್ಟ್ ದಾದಾಬಾಯಿ ನವರೋಜಿ ವಾರನ್‌ಹೆಸ್ಟಿಂಗ್ ಇಂಡಿಯಾ ಕಂಪನಿಯನ್ನು ಬ್ರಿಟಿಷ್ ರಾಜ್ಯದ ಅಧೀನಕ್ಕೊಳಪಡಿಸಿ ಅದನ್ನು ಒಂದು ವಿಭಾಗವೆಂದು ಪರಿಗಣಿಸಿತು. ನಂತರ ಅನೇಕ ಶಾಸನಗಳನ್ನು ಬ್ರಿಟಿಷರು ಹೊರಡಿಸಿದರು.

**ಮಾರ್ಲೆ-ಮಿಂಟೋ ಸುಧಾರಣೆಗಳು (ಸಾ. ಶ. 1909)**

ಲಾರ್ಡ್ ಮಿಂಟೋ ಭಾರತದಲ್ಲಿ ವೈಸ್‌ರಾಯ್ ಆಗಿದ್ದನು. ಅದೇ ಅವಧಿಯಲ್ಲಿ ಲಾರ್ಡ್ ಮಾರ್ಲೆ ಸೆಕ್ರೆಟರಿ ಆಫ್ ಸ್ಟೇಟ್ ಆಗಿದ್ದನು. ಲಾರ್ಡ್ ಕರ್ಜನ್‌ನ ದರ್ಪದ ಆಳಿಕೆ, ಭಾರತೀಯ ಕ್ರಾಂತಿಕಾರರು ನಡೆಸಿದ ಉಗ್ರ ಚಳವಳಿ ಮೊದಲಾದ ಕಾರಣಗಳಿಂದ ಮಾರ್ಲೆ ಮಿಂಟೋ ಸುಧಾರಣೆಗಳು ಜಾರಿಗೆ ಬರುವಂತೆ ಮಾಡಿದವು. ಈ ಕಾಯಿದೆಯ ಪ್ರಕಾರ ಸರ್ಕಾರದ ಕಾರ್ಯಕ್ರಮಗಳಲ್ಲಿ ಅರ್ಹರಾದ ಭಾರತೀಯರನ್ನು ಸೇರಿಸಿಕೊಳ್ಳುವುದಕ್ಕೆ ಅವಕಾಶ ಮಾಡಿಕೊಟ್ಟವು. ಕೇಂದ್ರ ಶಾಸನಸಭೆಯಲ್ಲಿ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಲು ನಿರ್ಣಯಿಸಲಾಯಿತು. ಪ್ರಾಂತ್ಯ

ಶಾಸನಸಭೆಯನ್ನು ವಿಸ್ತರಿಸಲಾಯಿತು.

ಮಾರ್ಲೆ ಮಿಂಟೋ ಸುಧಾರಣೆಗಳು ಭಾರತದ ರಾಜ್ಯಾಂಗ ಘಟನೆಯಲ್ಲಿ ಯಾವುದೇ ಕ್ರಾಂತಿಕಾರಕವಾದ ಬದಲಾವಣೆ ತರಲಿಲ್ಲ. ಪ್ರಜಾಪ್ರತಿನಿಧಿಗಳಿಗೆ ಯಾವ ಹೊಣೆಗಾರಿಕೆಯನ್ನೂ ಕೊಡಲಿಲ್ಲ.

**ಮಾಂಟೆಗ್ಯು - ಚಲ್ಮ್ಸ್‌ಫರ್ಡ್ ಸುಧಾರಣೆಗಳು (ಸಾ. ಶ. 1919)**

ಮಾರ್ಲೆ ಮಿಂಟೋ ಸುಧಾರಣೆಗಳು ಭಾರತೀಯರಿಗೆ ಸಮಾಧಾನವನ್ನುಂಟು ಮಾಡಲಿಲ್ಲ. 1917 ರಲ್ಲಿ ಆಗ ಸೆಕ್ರೆಟರಿ ಆಫ್ ಸ್ಟೇಟ್ ಆಗಿದ್ದ ಮಾಂಟೆಗ್ಯು ಅವರು ಒಂದು ಘೋಷಣೆ ಹೊರಡಿಸಿದರು. ಭಾರತೀಯರಿಗೆ ಆಡಳಿತದಲ್ಲಿ ಹೆಚ್ಚಿನ ಪಾತ್ರ ನೀಡಿ ಸ್ವಯಂ ಅಧಿಕಾರ ಸಂಸ್ಥೆಗಳು ಬೆಳೆಯುವಂತೆ ಮಾಡುವದೇ ಬ್ರಿಟಿಷ್ ಸರ್ಕಾರದ ನೀತಿಯಾಗಿದೆ ಎಂದು ಈ ಘೋಷಣೆಯಲ್ಲಿ ಸ್ಪಷ್ಟಪಡಿಸಿದರು. ಅಂದು ಭಾರತದ ವೈಸರಾಯಿಯಾಗಿದ್ದ ಲಾರ್ಡ್ ಮಿಂಟೋ ಈ ಕಾಯಿದೆಗಳನ್ನು ಭಾರತದಲ್ಲಿ ಜಾರಿಗೆ ತಂದನು. ಸೆಕ್ರೆಟರಿ ಆಫ್ ಸ್ಟೇಟ್‌ನ ಇಂಡಿಯಾ ಕೌನ್ಸಿಲ್ಲಿನಲ್ಲಿ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಲಾಯಿತು. ಇವರ

ಅಧಿಕಾರಾವಧಿ 5 ವರ್ಷಗಳೆಂದು ನಿರ್ಧರಿಸಲಾಯಿತು. ಭಾರತದ ಹೈಕಮಿಷನರ್ ಒಬ್ಬನನ್ನು ಲಂಡನ್ನಿನಲ್ಲಿ ನೇಮಕ ಮಾಡಲಾಯಿತು.

**1935 ರ ಶಾಸನ**

ಮಾರ್ಲೆ ಮಿಂಟೋ ಸುಧಾರಣೆಗಳು ಭಾರತೀಯರಿಗೆ ತೃಪ್ತಿ ತರಲಿಲ್ಲ. ಜನರನ್ನು ಸಮಾಧಾನಪಡಿಸಲು 1935 ರ ಭಾರತ ಸರ್ಕಾರದ ಕಾಯಿದೆಯು ಮಹತ್ವದ ಬದಲಾವಣೆಯನ್ನುಂಟು ಮಾಡಿತು. ಪ್ರಾಂತಗಳು ಮತ್ತು ರಾಜ್ಯಗಳ ಒಕ್ಕೂಟದಿಂದ ಭಾರತದ ಒಕ್ಕೂಟದ ರಚನೆಯಾಯಿತು. ಕೇಂದ್ರ ಸರ್ಕಾರದಲ್ಲಿ ದ್ವಿಮುಖಿ ಆಡಳಿತ ಪದ್ಧತಿಯನ್ನು ರೂಢಿಗೆ ತರಲಾಯಿತು. ಪ್ರಾಂತೀಯ ಸರಕಾರದಲ್ಲಿ ಜವಾಬಾರಿ ಸರಕಾರಗಳು ಅಸ್ತಿತ್ವಕ್ಕೆ ಬಂದವು. ಈ ಶಾಸನ ಭಾರತದ ಘಟನಾತ್ಮಕ ಇತಿಹಾಸದಲ್ಲಿ ಒಂದು ಮೈಲಿಗಲ್ಲಾಗಿದೆ.

## ಅಭ್ಯಾಸಗಳು

**I. ಈ ಕೆಳಕಂಡ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

1. ಖಾಯಂ ಜಮೀನ್ದಾರಿ ಪದ್ಧತಿಯನ್ನು ಜಾರಿಗೆ ತಂದವರು ಯಾರು?
2. ರೈತವಾರಿ ಪದ್ಧತಿ ಎಂದರೇನು?
3. 1813ರ ಚಾರ್ಟರ್ ಕಾಯ್ದೆಯಲ್ಲಿ ಭಾರತೀಯ ಶಿಕ್ಷಣಕ್ಕೆ ಮೀಸಲಿಟ್ಟ ಹಣದ ಮೊತ್ತವೆಷ್ಟು?
4. ಭಾರತದಲ್ಲಿ ರೆಗ್ಯುಲೇಟಿಂಗ್ ಕಾಯ್ದೆಯನ್ನು ಯಾರು, ಯಾವಾಗ ಜಾರಿಗೆ ತಂದರು?
5. 1857 ರಲ್ಲಿ ಸ್ಥಾಪನೆಗೊಂಡ ಭಾರತೀಯ ವಿಶ್ವವಿದ್ಯಾಲಯಗಳು ಯಾವುವು?

**II. ಈ ಕೆಳಕಂಡ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿರಿ.**

1. ಖಾಯಂ ಜಮೀನಾರಿ ಪದ್ಧತಿಯು ರೈತರ ಮೇಲೆ ಬೀರಿದ ಪರಿಣಾಮಗಳೇನು?
2. ಪಾಶ್ಚಾತ್ಯ ಶಿಕ್ಷಣದ ಪರಿಣಾಮಗಳನ್ನು ತಿಳಿಸಿರಿ.
3. ಭಾರತದಲ್ಲಿ ಪ್ರಮುಖ ಶಾಸನಾತ್ಮಕ ಸುಧಾರಣೆಗಳನ್ನು ಹೆಸರಿಸಿ.

**III. ಈ ಕೆಳಗಿನ 'ಎ' ಪಟ್ಟಿಗೆ ಸಂಬಂಧಿಸಿದ 'ಬಿ' ಪಟ್ಟಿಯಲ್ಲಿನ ವಿಷಯಗಳನ್ನು ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| 1. ವಾರನ್ ಹೇಸ್ಟಿಂಗ್ | a. ಖಾಯಂ ಜಮಿನ್ದಾರಿ ಪದ್ಧತಿ |
| 2. ಕಾರ್ನ್‌ವಾಲೀಸ್ | b. ಇಂಗ್ಲಿಷ್ ಶಿಕ್ಷಣ ನೀತಿ |
| 3. ಥಾಮಸ್ ಮನ್ರೋ | c. ಕಂದಾಯ ವಸೂಲಿಯ ಹರಾಜು ವ್ಯವಸ್ಥೆ |
| 4. ವಿಲಿಯಂ ಬೆಂಟಿಂಕ್ | d. ಸಂಪತ್ತಿನ ಸೋರಿಕೆ ಸಿದ್ಧಾಂತ |
| 5. ದಾದಾಬಾಯಿ ನವರೋಜಿ | e. ರೈತವಾರಿ ಪದ್ಧತಿ |

**IV. ಚರ್ಚಿಸಿರಿ**

## ಪಾಠ-12: ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆ

### ಪಾಠದ ಪರಿಚಯ

ಪಾಶ್ಚಿಮಾತ್ಯ ಶಿಕ್ಷಣದ ಅನು ಷಾಶನ ಭಾರತೀಯರಲ್ಲಿ ಒಂದು ಹೊಸ ಜಾಗೃತಿಯನ್ನು ಮೂಡಿಸಿತು. ಅಲ್ಲದೆ ಅದು ಭಾರತೀಯ ಸಮಾಜದ ದೌರ್ಬಲ್ಯಗಳು ಮತ್ತು ಅವನತಿಯನ್ನು ಬಹಿರಂಗಗೊಳಿಸಿತು. ಇದರಿಂದಾಗಿ ಭಾರತೀಯರಿಗೆ ತಮ್ಮ ಸಮಾಜದಲ್ಲಿನ ನ್ಯೂನತೆಗಳ ಬಗ್ಗೆ ಅರಿವುಂಟಾಯಿತಲ್ಲದೆ, ಅವುಗಳನ್ನು ಸರಿಪಡಿಸಲು ಹಲವಾರು ಮಾರ್ಗಗಳನ್ನು ಹುಡುಕತೊಡಗಿದರು. ಈ ನಿಟ್ಟಿನಲ್ಲಿ ಸಂಘಸಂಸ್ಥೆಗಳನ್ನು ಸ್ಥಾಪಿಸುವ ಮೂಲಕ ಭಾರತೀಯ ಸಮಾಜವನ್ನು ಸುಧಾರಿಸಲು ಶ್ರಮಿಸಿದ 19 ನೇ ಶತಮಾನದ ಧಾರ್ಮಿಕ ನಾಯಕರ ಕಾರ್ಯಗಳು ಈ ಪಾಠದಲ್ಲಿದೆ.

### ಸಾಮರ್ಥ್ಯಗಳು

1. 19 ನೇ ಶತಮಾನದಲ್ಲಿ ಭಾರತೀಯ ಸಮಾಜದ ಜಾಗೃತಿಗೆ ಕಾರಣವಾದ ಅಂಶಗಳು ಮತ್ತು ಚಿಂತನಶೀಲರ ಪ್ರಯತ್ನಗಳನ್ನು ಕುರಿತು ಅರಿಯುವುದು.
2. ಸಮಾಜದ ಜಾಗೃತಿಗೆ ಸಂಘಸಂಸ್ಥೆಗಳು ಮತ್ತು ಸುಧಾರಕರು ನೀಡಿದ ಕೊಡುಗೆಗಳನ್ನು ಸ್ಮರಿಸುವುದು.
3. ಸಾಮಾಜಿಕ ಸುಧಾರಣಾ ಚಳವಳಿಯಿಂದುಂಟಾದ ಪರಿಣಾಮಗಳನ್ನು ಅರ್ಥೈಸಿಕೊಳ್ಳುವುದು.

ಆಧುನಿಕ ಪಾಶ್ಚಿಮಾತ್ಯ ವಿಚಾರಧಾರೆಯ ಪರಿಣಾಮವಾಗಿ ಭಾರತದಲ್ಲಿ ಒಂದು ನೂತನ ಜಾಗೃತಿ ಉಂಟಾಯಿತು. ಪಾಶ್ಚಿಮಾತ್ಯ ಸಂಸ್ಕೃತಿ, ವೇಷಭೂಷಣ, ನಡಾವಳಿಗಳು, ಸಮಾಜ, ಧಾರ್ಮಿಕ ವಿಚಾರಗಳು, ನಂಬಿಕೆಗಳು ಮತ್ತು ಆಂಗ್ಲರ ಸಾಮಾಜಿಕ ಆದರ್ಶಗಳು ಭಾರತೀಯರ ಮೇಲೆ ಗಾಢವಾದ ಪ್ರಭಾವ ಬೀರಿದವು. ವಿಶೇಷವಾಗಿ ಭಾರತೀಯರು ಪಾಶ್ಚಿಮಾತ್ಯರ ವೈಜ್ಞಾನಿಕ ವಿಚಾರಧಾರೆ, ಮಾನವತಾವಾದ ಹಾಗೂ ಕಾರ್ಯಕಾರಣ ಸಿದ್ಧಾಂತಗಳಿಂದ ಪ್ರಭಾವಿತರಾದರು. ಈ ಬೆಳವಣಿಗೆಗಳ ಪರಿಣಾಮವು ವಸಾಹತುಶಾಹಿ ಕಾಲದ ಭಾರತದಲ್ಲಿ ನವೋದಯದ ಹುಟ್ಟಿಗೆ ನಾಂದಿಯಾಯಿತು. ಸಮಾನತೆಯ ಆಶಯಗಳನ್ನು ಸಾರುವ ಹೊಸ ಅರಿವೇ ಈ ನವೋದಯ ಚಳವಳಿ. ಇದನ್ನು ಸಾಮಾಜಿಕ ಮತ್ತು ಧಾರ್ಮಿಕ ಚಳವಳಿಯ ಹೆಸರಿನಿಂದಲೂ ಕರೆಯುವರು. ಈ ಚಳವಳಿಗಳು ದಲಿತ ಮತ್ತು ಮಹಿಳಾ ವರ್ಗಗಳ ಸಾಮಾಜಿಕ ಸಬಲೀಕರಣಕ್ಕೆ ಹೆಚ್ಚು ಒತ್ತು ನೀಡಿದವು. ಬ್ರಿಟಿಷರು ಇಂಗ್ಲಿಷ್ ಶಿಕ್ಷಣವನ್ನು ಭಾರತೀಯರ ವಿಮೋಚನೆಗೆ ದಾರಿಯಾಗಿದೆಯೆಂದು ಪ್ರತಿಪಾದಿಸುತ್ತಲೆ, ವಸಾಹತು ಸಿದ್ಧಾಂತವನ್ನು ಭಾರತೀಯರ ಮೇಲೆ ಹೇರುತ್ತಾ ಹೋದರು. ನಮ್ಮ ದೇಶಕ್ಕೆ ದೊಡ್ಡ ಪರಂಪರೆಯಿದೆ. ಆದರೆ ಪರಂಪರೆಯ ಎಲ್ಲ ಸಂಗತಿಗಳು ಅನುಕರಣೀಯವಲ್ಲ. ಅದರಲ್ಲಿನ ಮೂಢ ನಂಬಿಕೆಗಳನ್ನು ತೊಡೆದು ಹಾಕುವ ಅಗತ್ಯವಿದೆ.

**ರಾಜಾ ರಾಮಮೋಹನರಾಯ್ (ಬ್ರಹ್ಮಸಮಾಜ- ಸಾ. ಶ. 1828)**



ಆಧುನಿಕ ಕಾಲಘಟ್ಟದ ಭಾರತದಲ್ಲಿ ಸಾಮಾಜಿಕ ಜಾಗೃತಿ ಮೂಡಿಸಿದವರಲ್ಲಿ ರಾಜಾರಾಮಮೋಹನ ರಾಯ್ ಮೊದಲಿಗರು. ಇವರನ್ನು 'ಭಾರತದ ನವೋದಯದ ಪಿತಾಮಹ' ಎಂದು ರವೀಂದ್ರನಾಥ ಟ್ಯಾಗೋರ್ ಕರೆದಿರುವುದು ಸಮರ್ಥನೀಯವಾಗಿದೆ.

ಜಡ ಭಾರತೀಯ ಸಮಾಜದಲ್ಲಿ ಚೇತನ ತುಂಬುವ ಉದ್ದೇಶವನ್ನು ಹೊಂದಿದ್ದ ರಾಜಾ ರಾಮಮೋಹನರಾಯ್ 'ಆತ್ಮೀಯಸಭಾ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ನಂತರ 1828 ರಲ್ಲಿ 'ಬ್ರಹ್ಮಸಭಾ'ವನ್ನು ಸ್ಥಾಪಿಸಿದರು. ಅದು ಮರು ವರ್ಷ 'ಬ್ರಹ್ಮಸಮಾಜ' ಎಂದು ನಾಮಕರಣಗೊಂಡಿತು. ರಾಜಾ ರಾಮಮೋಹನರಾಯ್ ಪೂರ್ವ ಮತ್ತು ಪಶ್ಚಿಮದ ಚಿಂತನೆಗಳ ಸಮನ್ವಯದ ಪ್ರತಿನಿಧಿಯಾಗಿದ್ದರು. ಸತಿ ಪದ್ಧತಿ, ಜಾತಿ ಪದ್ಧತಿ, ಮೂರ್ತಿ ಪೂಜೆ, ಬಹುಪತ್ನಿತ್ವ, ಬಾಲ್ಯ ವಿವಾಹ ಹಾಗೂ ಎಲ್ಲಾ ತರಹ ಮೂಢ ನಂಬಿಕೆಗಳನ್ನು ಬ್ರಹ್ಮಸಮಾಜವು ಬಲವಾಗಿ ವಿರೋಧಿಸಿತು. ರಾಮಮೋಹನರಾಯ್ ಮತ್ತು ಅವರ ಸಹವರ್ತಿಗಳು ಅರ್ಥಹೀನ ಸತಿಪದ್ಧತಿಯನ್ನು ನಿರ್ಮೂಲನಗೊಳಿಸುವಂತೆ ಬ್ರಿಟಿಷ್ ಸರ್ಕಾರವನ್ನು ಕೋರಿದರು.

ಇದರಿಂದ ಅಂದಿನ ಗರ್ವನರ್ ಜನರಲ್ ಆಗಿದ್ದ ವಿಲಿಯಮ್ ಬೆಂಟಿಂಕ್‌ನು ಸತಿ ಪದ್ಧತಿ ಆಚರಣೆಯನ್ನು ಕಾನೂನು ಬಾಹಿರವೆಂದು ಘೋಷಿಸಿದನು (ಸಾ. ಶ. 1829). ಪಾಶ್ಚಿಮಾತ್ಯ ಶಿಕ್ಷಣವನ್ನು ಪ್ರತಿಪಾದಿಸಿದ ರಾಮಮೋಹನರಾಯ್ ಆ ಮೂಲಕ ಅಮಾನವೀಯ ಪದ್ಧತಿಗಳನ್ನು ತೊಡೆದು ಹಾಕಬಹುದೆಂದು ಬಲವಾಗಿ ನಂಬಿದ್ದರು. ವಿಧವಾ ವಿವಾಹ ಮತ್ತು ಏಕದೇವತಾರಾಧನೆಯ ಪರವಾಗಿದ್ದ ರಾಮಮೋಹನ ರಾಯ್ ಅವರು 'ಸಂವಾದ ಕೌಮುದಿ' ಪತ್ರಿಕೆಯ ಮೂಲಕ ಸಾಮಾಜಿಕ ಸುಧಾರಣಾ ಚಳವಳಿಯ ಪ್ರಕ್ರಿಯೆಯನ್ನು ಆರಂಭಿಸಿದರು.



ವೈಚಾರಿಕತೆಯ ಮೂಲಕ ಹಿಂದೂ ಧರ್ಮವನ್ನು ಪರಿಶುದ್ಧಗೊಳಿಸಲು ರಾಮಮೋಹನರಾಯ್ ಯತ್ನಿಸಿದರು.

ರಾಮಮೋಹನರಾಯ್ ಇಂಗ್ಲಿಷ್ ಶಿಕ್ಷಣವನ್ನು ಪ್ರತಿಪಾದಿಸಿದ ಮೊದಲಿಗರಲ್ಲಿ ಒಬ್ಬರು. ತಮ್ಮ ಖರ್ಚಿನಲ್ಲಿ ಇಂಗ್ಲಿಷ್ ಶಾಲೆ ನಡೆಸುತ್ತಿದ್ದರು. ಅವರು ವೇದಾಂತ ಕಾಲೇಜನ್ನು ಕೂಡ ಸ್ಥಾಪಿಸಿದರು. ರಾಮಮೋಹನರಾಯ್ ಭಾರತೀಯ ಪತ್ರಿಕೋದ್ಯಮದ ಆದ್ಯ ಪ್ರವರ್ತಕರಲ್ಲಿ ಒಬ್ಬರಾಗಿದ್ದಾರೆ. ಹಲವು ನಿಯತಕಾಲಿಕೆಗಳನ್ನು ಅವರು ಪ್ರಕಟಿಸಿದರು. ಒಟ್ಟಿನಲ್ಲಿ ಅವರು ಜೀವನವಿಡೀ ಸಾಮಾಜಿಕ ರಾಜಾ ರಾಮಮೋಹನ ರಾಯ್ ಅನ್ಯಾಯದ ವಿರುದ್ಧ ಹೋರಾಡಿದರು. ಅವರ ಸಮಾಜಮುಖಿ ಕಾರ್ಯಗಳನ್ನು ಮುಂದೆ ದೇವೇಂದ್ರನಾಥ ಟ್ಯಾಗೋರ್ ಮತ್ತು ಕೇಶವಚಂದ್ರ ಸೇನ್ ಮುಂದುವರಿಸಿದರು.

ನಿಮಗೆ ತಿಳಿದಿರಲಿ: ‘ರಾಜಾ’ ಎಂಬುದು ರಾಮಮೋಹನ ರಾಯ್ ಅವರಿಗೆ ಮೊಗಲ್ ಬಾದಷಹ 1829 ರಲ್ಲಿ ನೀಡಿದ ಬಿರುದಾಗಿತ್ತು.

**ಆತ್ಮಾರಾಮ್ ಪಾಂಡುರಂಗ (ಪ್ರಾರ್ಥನಾ ಸಮಾಜ- ಸಾ. ಶ. 1867)**



ಪ್ರಾರ್ಥನಾ ಸಮಾಜವನ್ನು ಆತ್ಮಾರಾಮ್ ಪಾಂಡುರಂಗರು ಪ್ರಾರಂಭಿಸಿದರು. ಇದು ಬ್ರಹ್ಮ ಸಮಾಜದ ನಂತರ ಮುಂಬೈ ಪ್ರದೇಶದಲ್ಲಿ ಪ್ರಾರಂಭವಾದ ಪ್ರಮುಖ ಸಮಾಜ ಸುಧಾರಣಾ ಸಂಸ್ಥೆ. ಬಾಲ್‌ವಾಗ್ಲೆ, ಎನ್. ಜಿ. ಚಂದಾವರ್ಕರ್, ಎಂ. ಜಿ. ರಾನಡೆ ಮತ್ತು ಇತರರು ಇದರ ಪ್ರಮುಖ ನಾಯಕರು. ಇವರು ವಿಧವಾ ವಿವಾಹ, ಅಂತರ್ಜಾತಿ ವಿವಾಹ,

ಮಹಿಳೆಯರ ಸ್ಥಾನಮಾನದ ಉನ್ನತೀಕರಣ ಮತ್ತು ಶೋಷಿತ ವರ್ಗದವರ ಅಭಿವೃದ್ಧಿಯ ಕಡೆಗೆ ಗಮನ ಹರಿಸಿದರು. ಅಲ್ಲದೆ ನಿರ್ಗತಿಕರಿಗೆ ಮತ್ತು ಅನಾಥರಿಗೆ ಆಶ್ರಮಗಳನ್ನು ಸ್ಥಾಪಿಸಿದರು. ವಿಧವೆಯರ ಉದ್ಧಾರಕ್ಕಾಗಿ ಶಿಕ್ಷಣ ಸಂಸ್ಥೆಗಳನ್ನು ತೆರೆದರು.

**ಮಹಾತ್ಮ ಜ್ಯೋತಿಬಾ ಫುಲೆ (ಸತ್ಯಶೋಧಕ ಸಮಾಜ- ಸಾ.ಶ. 1873)**



ಮಹಾತ್ಮ ಜ್ಯೋತಿಬಾ ಫುಲೆ

ಮಹಾತ್ಮ ಜ್ಯೋತಿಬಾ ಫುಲೆಯವರಿಂದ ಮಹಾರಾಷ್ಟ್ರದಲ್ಲಿ ಬ್ರಾಹ್ಮಣೇತರ ಚಳುವಳಿ ಆರಂಭವಾಯಿತು. ಮಹಾರಾಷ್ಟ್ರದ ಕೆಳವರ್ಗದವರಲ್ಲಿ ಜಾಗೃತಿ ಮೂಡಿಸುವ ಸಲುವಾಗಿ ಅವರು ಸತ್ಯಶೋಧಕ ಸಮಾಜವನ್ನು ಸ್ಥಾಪಿಸಿದರು. ಅಸ್ಪೃಶ್ಯರು, ಅನಾಥರು ಮತ್ತು ವಿಧವೆಯರಿಗಾಗಿ ಶಾಲೆಗಳನ್ನು ತೆರೆದರು. ಬ್ರಾಹ್ಮಣ ಪುರೋಹಿತಶಾಹಿಯನ್ನು ಖಂಡಿಸಿದ ಅವರು 'ಗುಲಾಮಗಿರಿ' ಎಂಬ ಕೃತಿಯನ್ನು ರಚಿಸಿ ತಮ್ಮ ಚಿಂತನೆಗಳನ್ನು ಸಂವಾದದ ರೂಪದಲ್ಲಿ ವಿವರಿಸಿದರು. ಪತ್ನಿ ಸಾವಿತ್ರಿಬಾಯಿಯನ್ನು ಜೊತೆಗೂಡಿ ಪುಣೆಯಲ್ಲಿ ಬಾಲಕಿಯರ ಶಾಲೆಯನ್ನು ಆರಂಭಿಸಿದರು. ಬಾಲ ವಿಧವೆಯರಿಗೆ 1863 ರಲ್ಲಿ ಪುನರ್ ವಸತಿ ಕೇಂದ್ರವನ್ನು ತೆರೆಯುವ ಮೂಲಕ ನಡೆಯುತ್ತಿದ್ದ ಶಿಶುಹತ್ಯೆ ಪ್ರಕರಣಗಳನ್ನು ಕೊನೆಗಾಣಿಸುವ ಪ್ರಯತ್ನ ಮಾಡಿದರು. ವಿಧವಾ ವಿವಾಹವನ್ನು ಉತ್ತೇಜಿಸಿದರು. ವಾಸ್ತವವಾಗಿ ಫುಲೆ ಅವರನ್ನು ಬಿ. ಆರ್. ಅಂಬೇಡ್ಕರ್ ತಮ್ಮ ತಾತ್ವಿಕ ಮಾರ್ಗದರ್ಶಕರನ್ನಾಗಿ ಸ್ವೀಕರಿಸಿದ್ದರು.

**ತರುಣ ಬಂಗಾಲಿ ಚಳವಳಿ**

ರಾಜಾರಾಮಮೋಹನರಾಯ್ ಅವರ ಸುಧಾರಣಾ ತುಡಿತ ಬಂಗಾಳದ ಅನೇಕ ಯುವ ಚಿಂತನಶೀಲರನ್ನು ಪ್ರೇರೇಪಿಸಿತು. ಇದು ತರುಣ ಬಂಗಾಳಿ ಚಳುವಳಿಗೆ ನಾಂದಿಯಾಯಿತು. ಆಂಗ್ಲೋಇಂಡಿಯನ್ ಯುವಕ ಹೆನ್ರಿ ವಿವಿಯನ್ ಡಿರೋಜಿಯರವರು ಈ ಚಳುವಳಿಯ ನೇತಾರರಾಗಿದ್ದರು. ಸ್ವಂತಿಕೆ ಮತ್ತು ವಿವೇಚನೆಯಿಂದ ಆಲೋಚಿಸುವಂತೆ ಅವರು ಯುವಕರಿಗೆ ಕರೆ ನೀಡಿದರು. ಆದರೆ ಭಾರತೀಯರು ಆ ಸಮಯದಲ್ಲಿ ಅವರ ಕರೆಗೆ ಸೂಕ್ತವಾಗಿ ಸ್ಪಂದಿಸಲಿಲ್ಲ.

**ಸ್ವಾಮಿ ದಯಾನಂದ ಸರಸ್ವತಿ (ಆರ್ಯ ಸಮಾಜ- ಸಾ. ಶ. 1875)**



ಸ್ವಾಮಿ ದಯಾನಂದ ಸರಸ್ವತಿಯವರು ಆರ್ಯ ಸಮಾಜವನ್ನು ಸ್ಥಾಪಿಸಿದರು. ಅವರ ಮೊದಲ ಹೆಸರು ಮೂಲಶಂಕರ ಎಂದಾಗಿತ್ತು. ವೇದಗಳ ಕಾಲದ ಭಾರತದಲ್ಲಿ ಆದರ್ಶ ಸಮಾಜ ಅಸ್ತಿತ್ವದಲ್ಲಿತ್ತು; ಅಂತಹದೇ ಸಮಾಜ ಇನ್ನೊಮ್ಮೆ ಸ್ಥಾಪನೆಯಾಗಬೇಕು ಎಂಬುದು ಅವರ ಆಶಯವಾಗಿತ್ತು. ಈ ಹಿನ್ನೆಲೆಯಲ್ಲಿ ದಯಾನಂದ ಸರಸ್ವತಿಯವರು "ವೇದಗಳಿಗೆ ಹಿಂದಿರುಗಿ" ಎಂದು ಕರೆ ನೀಡಿದರು. ಮೂರ್ತಿಪೂಜೆ, ಅಸ್ಪೃಶ್ಯತೆ, ಬಾಲ್ಯವಿವಾಹ ಮತ್ತು ಜಾತಿ ಪದ್ಧತಿಯನ್ನು ಅವರು ಖಂಡಿಸಿದರು. ದಯಾನಂದ ಸರಸ್ವತಿಯವರು ಅಂತರ್ಜಾತೀಯ ಮತ್ತು ವಿಧವಾ ವಿವಾಹವನ್ನು ಪ್ರೋತ್ಸಾಹಿಸಿದರು. ಅಲ್ಲದೆ ಏಕದೇವತಾರಾಧನೆಯನ್ನು ಪ್ರತಿಪಾದಿಸಿದರು.

ದಯಾನಂದ ಸರಸ್ವತಿಯವರು ತಮ್ಮ ವಿಚಾರಧಾರೆಯನ್ನು ಪ್ರಸಿದ್ಧ ಕೃತಿಯಾದ 'ಸತ್ಯಾರ್ಥ ಪ್ರಕಾಶ'ದಲ್ಲಿ ಅಭಿವ್ಯಕ್ತಿಸಿದ್ದಾರೆ. ಆರ್ಯ ಸಮಾಜವು ಭಾರತೀಯ ಶಿಕ್ಷಣಾಭಿವೃದ್ಧಿಗೆ ಶ್ರಮಿಸಿದ್ದಲ್ಲದೆ ರಾಷ್ಟ್ರೀಯ ಚಳವಳಿಗೆ ಸ್ಫೂರ್ತಿ ನೀಡಿತ್ತು. ಆರ್ಯ ಸಮಾಜದ ನಾಯಕರಾದ ಲಾಲಾ ಹಂಸರಾಜ್ ಅವರು ಲಾಹೋರಿನಲ್ಲಿ "ದಯಾನಂದ ಆಂಗ್ಲೋವೇದಿಕ್ ಶಾಲೆ"ಯನ್ನು ಸ್ಥಾಪಿಸಿದರು. ತಿಲಕ್, ಲಾಲಾಲಜಪತ್ ರಾಯ್‌ರಂತಹ ರಾಷ್ಟ್ರೀಯ ನಾಯಕರು ಆರ್ಯ ಸಮಾಜದ ತತ್ವ ಮತ್ತು ಚಿಂತನೆಗಳಿಂದ ಗಾಢವಾಗಿ ಪ್ರಭಾವಿತರಾದರು. ಮತಾಂತರಗೊಂಡಿದ್ದವರನ್ನು ಮತ್ತೆ ಹಿಂದೂ ಧರ್ಮಕ್ಕೆ ಕರೆತರುವುದಕ್ಕಾಗಿ ದಯಾನಂದರ ಶಿಷ್ಯರಾದ ಶ್ರದ್ಧಾನಂದರು "ಶುದ್ಧಿ ಚಳವಳಿ"ಯನ್ನು ಆರಂಭಿಸಿದರು.

ದಯಾನಂದರು ಕೇವಲ ಜನ್ಮದ ಆಧಾರದಲ್ಲಿ ಬ್ರಾಹ್ಮಣರು ಅಧಿಕಾರ ಪಡೆಯುವುದನ್ನು ತಿರಸ್ಕರಿಸಿದರು.ಸ್ತ್ರೀಯರ ಸಹಿತ ಎಲ್ಲರಿಗೂ ವೇದಗಳನ್ನು ಕಲಿಯುವ ಅಧಿಕಾರವಿದೆಯೆಂದು ಘೋಷಿಸಿದರು. ಗೋಪೂಜೆಯನ್ನು ಪ್ರತಿಪಾದಿಸಿದರು. ಸಂಕ್ಷಿಪ್ತವಾಗಿ ಹೇಳುವುದಾದರೆ ಆರ್ಯ ಸಮಾಜವು ಸ್ವರಾಜ್ಯ ಮತ್ತು ಸ್ವದೇಶಿ ಭಾವನೆಯನ್ನು ಪ್ರಚೋದಿಸಿದ ಒಂದು ಆಂದೋಲನವಾಗಿತ್ತು.




**ಸ್ವಾಮಿ ವಿವೇಕಾನಂದ (ರಾಮಕೃಷ್ಣ ಮಿಷನ್- ಸಾ. ಶ. 1897)**





“ಏಳಿ! ಎದ್ದೇಳಿ! ಗುರಿ ಮುಟ್ಟುವ ತನಕ ನಿಲ್ಲದಿರಿ” ಇದು ಸ್ವಾಮಿ ವಿವೇಕಾನಂದರು ಭಾರತೀಯ ಯುವಜನತೆಗೆ ನೀಡಿದ ಕರೆ. ಇವರ ಮೊದಲ ಹೆಸರು ನರೇಂದ್ರನಾಥ ದತ್ತ. ಇವರು ಕಲ್ಕತ್ತೆಯಲ್ಲಿ 1863 ಜನವರಿ 12 ರಂದು ಜನಿಸಿದರು. ರಾಮಕೃಷ್ಣ ಪರಮಹಂಸರ ಶಿಷ್ಯರಾಗಿದ್ದ ಇವರು ತದನಂತರದಲ್ಲಿ ಸನ್ಯಾಸ ಸ್ವೀಕರಿಸಿದರು. ರಾಮಕೃಷ್ಣರ ಮರಣದ ನಂತರ ಅವರ ಶಿಷ್ಯರನ್ನು ಒಗ್ಗೂಡಿಸಿ ಮಾರ್ಗದರ್ಶನ ನೀಡುವ ಜವಾಬ್ದಾರಿ ಸ್ವಾಮಿ ವಿವೇಕನಂದರ ಹೆಗಲ ಮೇಲೆ ಬಿತ್ತು. ಅಮೆರಿಕದ ಚಿಕಾಗೋ ನಗರದಲ್ಲಿ ನಡೆದ ಪ್ರಥಮ ವಿಶ್ವಧರ್ಮ ಸಮ್ಮೇಳನದಲ್ಲಿ (1893) ಅವರು ವೇದಾಂತವನ್ನು ಕುರಿತು ಮಾಡಿದ ಭಾಷಣ ಅವರನ್ನು ವಿಶ್ವವಿಖ್ಯಾತರನ್ನಾಗಿಸಿತು. ಪಶ್ಚಿಮ ಸಂಸ್ಕೃತಿಯ ಹಲವು ಸಾಧನೆಗಳು, ಮಹಿಳಾ ಸಮಾನತೆಯ ಆಶಯಗಳು ಅವರಿಗೆ ಹಿಡಿಸಿದವು.

ಭಾರತವನ್ನು ಕಾಲ್ನಡಿಗೆಯಲ್ಲಿ ಸಂಚರಿಸಿದ ವಿವೇಕಾನಂದರು ಭಾರತದ ಅಂದಿನ ಸಾಮಾಜಿಕ ಸ್ಥಿತಿಗತಿಯನ್ನು ಕಂಡು ಮರುಗಿದರು. ಎಲ್ಲಿಯವರೆಗೆ ಜನರು ಹಸಿವು, ಬಡತನ ಮತ್ತು ಅಜ್ಞಾನದಲ್ಲಿರುವರೋ ಅಲ್ಲಿಯವರೆಗೆ ನಾನು ಮತ್ತೆ ಮತ್ತೆ ಜನ್ಮತಾಳಿ ಅದನ್ನು ಹೋಗಲಾಡಿಸಲು ಶ್ರಮಿಸುತ್ತೇನೆ, ಎನ್ನುತ್ತಿದ್ದರು.

ಮಾನವ ಹಿತ ಮತ್ತು ಸಮಾಜಸೇವೆಯನ್ನು ನಿರಂತರವಾಗಿ ನಡೆಸಿಕೊಂಡು ಹೋಗಲು ಅವರು ರಾಮಕೃಷ್ಣ ಮಿಷನ್ ಸ್ಥಾಪಿಸಿದರು. ಸ್ತ್ರೀಯರ ಬಗ್ಗೆ ಅಪಾರ ಕಾಳಜಿ ಹಾಗೂ ಗೌರವ ಹೊಂದಿದ ಸ್ವಾಮೀಜಿಯವರು “ಸ್ತ್ರೀಯರ ಉದ್ಧಾರ ನಮ್ಮ ರಾಷ್ಟ್ರದ ಉದ್ಧಾರ” ಎಂದು ಒತ್ತಿ ಹೇಳಿದರು. ‘ದರಿದ್ರ ನಾರಾಯಣ’ರ (ಬಡವರ) ಸೇವೆಗೆ ಕರೆ ನೀಡಿದರು. ಒಟ್ಟಾರೆ ಭಾರತದ ಉನ್ನತಿಯ ಕನಸನ್ನು ಕಂಡರು.

ಸ್ವಾಮಿ ವಿವೇಕಾನಂದರನ್ನು ಬಾಲ ಗಂಗಾಧರ ತಿಲಕರು ‘ಭಾರತದ ರಾಷ್ಟ್ರೀಯತೆಯ ನಿಜವಾದ ಪಿತಾಮಹ’ ಎಂದು ಬಣ್ಣಿಸಿದ್ದಾರೆ. ಸುಭಾಷಚಂದ್ರ ಬೋಸರನ್ನು ಒಳಗೊಂಡಂತೆ

ಅನೇಕ ರಾಷ್ಟ್ರೀಯ ಹೋರಾಟಗಾರರು ಇವರ ಬರವಣಿಗೆಗಳಿಂದ ಪ್ರೇರಣೆಗೊಂಡರು.

ಪಂಡಿತ ಈಶ್ವರಚಂದ್ರ ವಿದ್ಯಾಸಾಗರರವರು ಬ್ರಾಹ್ಮಣೇತರ ವಿದ್ಯಾರ್ಥಿಗಳಿಗಾಗಿ ಸಂಸ್ಕೃತ ಕಾಲೇಜನ್ನು ತೆರೆದರು. 1856 ರಲ್ಲಿ ಮೊದಲಬಾರಿಗೆ ಮೇಲ್ವರ್ಗದಲ್ಲಿ ಕಾನೂನುಬದ್ಧ ವಿಧವಾ ಪುನರ್ವಿವಾಹವು ಕಲ್ಕತ್ತದಲ್ಲಿ ವಿದ್ಯಾಸಾಗರರವರ ನೇತೃತ್ವದಲ್ಲಿ ನಡೆಯಿತು.

ಸ್ವಾಮಿ ವಿವೇಕಾನಂದರು ವಿಶ್ವ ಧರ್ಮಸಮ್ಮೇಳನಕ್ಕೆ ಹೋಗುವ ಮುನ್ನ ಮೈಸೂರು ಸಂಸ್ಥಾನಕ್ಕೆ ಭೇಟಿ ನೀಡಿದ್ದರು. ವಿವೇಕಾನಂದರನ್ನು ತಮ್ಮ ಅರಮನೆಗೆ ಆಹ್ವಾನಿಸಿದ 10ನೇ ಚಾಮರಾಜ ಒಡೆಯರ್ ಅವರು ಸಮ್ಮೇಳನಕ್ಕೆ ಹೋಗಲು ಧನಸಹಾಯ ನೀಡಿದರು. ವಿವೇಕಾನಂದರ ಸಲಹೆ ಮೇರೆ ದಲಿತರಿಗೆ ಮೂರು ಪ್ರತ್ಯೇಕ ಶಾಲೆಗಳನ್ನು ಮೈಸೂರು ಒಡೆಯರ್ ತೆರೆದರು.

**ಚಟುವಟಿಕೆ:** ವಿವೇಕಾನಂದರು ಶಿಕಾಗೋ ವಿಶ್ವ ಧರ್ಮಸಮ್ಮೇಳನದಲ್ಲಿ ಮಾಡಿದ ಭಾಷಣದ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿರಿ.

ಮ್ಯಾಡಂ ಎಚ್. ಪಿ. ಬ್ಲಾವಟ್‌ಸ್ಕಿ ಹಾಗೂ ಕರ್ನಲ್ ಎಚ್. ಎಸ್. ಅಲ್ಕಾಟ್

(ಥಿಯಸಾಫಿಕಲ್ ಸೊಸೈಟಿ- ಸಾ. ಶ. 1875)





ಆನಿಬೆಸೆಂಟ್

ಥಿಯಸಾಫಿಕಲ್ ಸೊಸೈಟಿ (ಬ್ರಹ್ಮವಿದ್ಯಾಸಮಾಜ)ಯನ್ನು ರಷನ್ ಮಹಿಳೆ ಮ್ಯಾಡಂ ಎಚ್. ಪಿ. ಬ್ಲಾವಟ್‌ಸ್ಕಿ ಮತ್ತು ಅಮೆರಿಕದ ಕರ್ನಲ್ ಎಚ್. ಎಸ್. ಅಲ್ಕಾಟ್ ಇವರು ನ್ಯೂಯಾರ್ಕ್‌ನಲ್ಲಿ ಸ್ಥಾಪಿಸಿದರು. ಭಾರತಕ್ಕೆ ಆಗಮಿಸಿ ಚೆನ್ನೈ ಬಳಿಯ ಅಡಿಯಾರ್ ಎಂಬ ಸ್ಥಳದಲ್ಲಿ ಸೊಸೈಟಿಯ ಅಂತರ‍್ರಾಷ್ಟ್ರೀಯ ಕೇಂದ್ರವನ್ನು ಆರಂಭಿಸಿದರು. ನಂತರ ಡಾ. ಆನಿಬೆಸೆಂಟ್ ಇದರ ಅಧ್ಯಕ್ಷರಾಗಿದ್ದರು.

ಎಚ್. ಪಿ. ಬ್ಲಾವಟ್‌ಸ್ಕಿರವರು ಬರಹಗಾರರಾಗಿದ್ದು ಹಲವಾರು ಪ್ರಮುಖ ಕೃತಿಗಳನ್ನು ರಚಿಸಿರುವರು. ಈ ಕೃತಿಗಳಲ್ಲಿ ಮಾನವತೆಯ ವಿಶ್ವ ಬ್ರಾತೃತ್ವ, ತತ್ವಶಾಸ್ತ್ರ, ತುಲನಾತ್ಮಕ ಧರ್ಮ ಮತ್ತು ಪ್ರಕೃತಿಯ ಸತ್ಯ ಅರಿಯುವುದಾಗಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ.

ಡಾ. ಆನಿಬೆಸೆಂಟ್ ಭಾರತೀಯ ಸಂಸ್ಕೃತಿಯಿಂದ ಪ್ರಭಾವಿತರಾಗಿದ್ದ ಅವರು ಭಗವದ್ಗೀತೆಯನ್ನು ಇಂಗ್ಲಿಷ್ ಭಾಷೆಗೆ ಅನುವಾದ ಮಾಡಿದರು. 'ನ್ಯೂ ಇಂಡಿಯಾ' ಎಂಬ ಪತ್ರಿಕೆಗಳನ್ನು ಹೊರಡಿಸಿದರು. ಭಾರತದಲ್ಲಿ ಥಿಯಸಾಫಿಕಲ್ ಚಳವಳಿಯ ಕೇಂದ್ರ ಶಕ್ತಿಯಾಗಿ ಮುನ್ನಡೆಸಿದರು.

ಥಿಯಸಾಫಿಕಲ್ ಸೊಸೈಟಿಯ ಉದ್ದೇಶಗಳೆಂದರೆ:

1. ಭೇದವೆಲ್ಲವ ಬಿಟ್ಟು ವಿಶ್ವ ಭಾತೃತ್ವವನ್ನು ನೆಲೆಗೊಳಿಸುವುದು.
2. ಧರ್ಮ, ತತ್ತ್ವಶಾಸ್ತ್ರ ಮತ್ತು ವಿಜ್ಞಾನ ಇವುಗಳ ತುಲನಾತ್ಮಕ ಅಧ್ಯಯನ ನಡೆಸುವುದು.
3. ಪ್ರಕೃತಿಯ ನಿಗೂಢ ತತ್ವಗಳು ಮತ್ತು ಮನುಷ್ಯನಲ್ಲಿ ಅಡಗಿರುವ ಸುಪ್ತಶಕ್ತಿಗಳನ್ನು ಕುರಿತು ಶೋಧ ನಡೆಸುವುದು.

ಆನಿಬೆಸೆಂಟ್ ಬನಾರಸಿನಲ್ಲಿ ಸೆಂಟ್ರಲ್ ಹಿಂದೂ ಕಾಲೇಜನ್ನು ಸ್ಥಾಪಿಸಿದರು. ಇದೇ ಮುಂದೆ ಬನಾರಸ್ ಹಿಂದೂ ವಿಶ್ವವಿದ್ಯಾಲಯ ಎಂಬ ಹೆಸರನ್ನು ಪಡೆಯಿತು. ಬಾಲ್ಯವಿವಾಹವನ್ನು ತಡೆಯಲು ಮತ್ತು ಮೂಢನಂಬಿಕೆ ವಿರುದ್ಧ ಪ್ರಚಾರ ನಡೆಸಲು 'ಮುಂದಾಳುಗಳು' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಅವರು ಮುಂದೆ ಹೋಂರೂಲ್ ಚಳವಳಿಯನ್ನು ಸಹ ಆರಂಭಿಸಿದರು. ಹಾಗೆಯೇ ಭಾರತೀಯ ರಾಷ್ಟ್ರೀಯ ಕಾಂಗ್ರೆಸಿನ ಮೊದಲ ಮಹಿಳಾ ಅಧ್ಯಕ್ಷೆಯಾಗಿದ್ದರು.

ಸರ್ ಸಯ್ಯದ್ ಅಹ್ಮದ್‌ಖಾನ್ (ಅಲಿಘರ್ ಚಳವಳಿ)



ಸರ್ ಸಯ್ಯದ್ ಅಹ್ಮದ್ ಖಾನ್

ಬಹುತೇಕ ಮುಸ್ಲಿಮರು ಪಾಶ್ಚಾತ್ಯ ಶಿಕ್ಷಣವನ್ನು ಸಂಶಯದಿಂದ ನೋಡುತ್ತಿದ್ದರು ಮತ್ತು ತಮ್ಮ ಧರ್ಮ ಹಿತಾಸಕ್ತಿಗೆ ಮಾರಕವೆಂದು ನಂಬಿದ್ದರು. ಆರಂಭದಲ್ಲಿ ನವಾಬ್ ಅಬ್ದುಲ್ ಲತೀಫರು 1863 ರಲ್ಲಿ 'ಮಹಮಡನ್ ಲಿಟರರಿ ಸೊಸೈಟಿ' ಸ್ಥಾಪಿಸಿದರು. ಈ ಸಂಸ್ಥೆಯ ಮೂಲಕ ಮುಸ್ಲಿಮರಲ್ಲಿ ಇಂಗ್ಲಿಷ್ ಶಿಕ್ಷಣ ವಿಸ್ತರಿಸಲು ಪ್ರಯತ್ನಿಸಿದರು. ಜೊತೆಗೆ ಹಿಂದೂ-ಮುಸ್ಲಿಮರ ನಡುವೆ ಸಾಮರಸ್ಯ ತರುವ ಪ್ರಯತ್ನ ಮಾಡಿದರು. ಈ ಪ್ರಯತ್ನಕ್ಕೆ ಚಳವಳಿಯ ಸ್ವರೂಪ ನೀಡಿದವರು ಸರ್ ಸಯ್ಯದ್ ಅಹ್ಮದ್‌ಖಾನ್. 1817 ರಲ್ಲಿ ದಿಲ್ಲಿಯಲ್ಲಿ ಜನಿಸಿದ ಇವರು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯಲ್ಲಿ ನ್ಯಾಯಾಂಗ ಅಧಿಕಾರಿಯಾಗಿ ನೇಮಕಗೊಂಡರು. ತನ್ನ ಸಮುದಾಯದವರು. ಇಂಗ್ಲಿಷ್ ಶಿಕ್ಷಣದಿಂದ ವಂಚಿತರಾಗಿ ಆರ್ಥಿಕ ಹಾಗೂ ಸಾಮಾಜಿಕ ಅವಕಾಶಗಳನ್ನು ಕಳೆದುಕೊಂಡಿದ್ದಾರೆ ಎಂದು ಭಾವಿಸಿದರು. ಶಿಕ್ಷಣವನ್ನು ಪಡೆಯುವ ಮೂಲಕ ಸರ್ಕಾರದಲ್ಲಿ ಮುಸ್ಲಿಂ ಸಮುದಾಯ ಸೂಕ್ತ ಪ್ರಾತಿನಿಧ್ಯ ಪಡೆಯಬೇಕೆಂಬುದು ಅವರ ಮಹದಾಸೆಯಾಗಿತ್ತು.

ಅಂತೆಯೇ ಒಬ್ಬ ಸಮಾಜ ಸುಧಾರಕರಾಗಿ ಪರ್ದಾಪದ್ಧತಿ, ಬಹುಪತ್ನಿತ್ವ ಹಾಗೂ ವಿವಾಹ ವಿಚ್ಛೇದನ ಪದ್ಧತಿಗಳನ್ನು ವಿರೋಧಿಸಿದರು. ಇಂಗ್ಲಿಷಿನ ವೈಜ್ಞಾನಿಕ ಮತ್ತು ಸಾಹಿತ್ಯಕ ಕೃತಿಗಳನ್ನು ಉರ್ದುವಿಗೆ ಭಾಷಾಂತರಿಸಲು ಟ್ರಾನ್ಸ್ ಲೇಷನ್ ಸೊಸೈಟಿಯನ್ನು ಪ್ರಾರಂಭಿಸಿದರು. ಅನಂತರದಲ್ಲಿ ಈ ಸಂಸ್ಥೆ 'ಸೈಂಟಿಫಿಕ್ ಸೊಸೈಟಿ' ಎಂದು ನಾಮಕರಣಗೊಂಡಿತು. ವೈಜ್ಞಾನಿಕ ಆಲೋಚನೆಗಳನ್ನು ಮುಸ್ಲಿಮರಲ್ಲಿ ಪ್ರಚಾರ ಪಡಿಸಲು 'ಆಲಿಘರ್ ಇನ್‌ಸ್ಟಿಟ್ಯೂಟ್ ಗೆಜೆಟ್'

ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು. ಈ ಪತ್ರಿಕೆಯು ಇಂಗ್ಲಿಷ್ ಮತ್ತು ಉರ್ದು ಭಾಷೆಗಳಲ್ಲಿ ಪ್ರಕಟವಾಗುತ್ತಿತ್ತು. 1875 ಮಹಮಡನ್ ಆಂಗ್ಲೊ ಓರಿಯಂಟಲ್ ಕಾಲೇಜನ್ನು ಆರಂಭಿಸಿದರು. ಈ ಸಂಸ್ಥೆಯೇ 1920 ರಲ್ಲಿ ಅಲಿಘರ್ ಮುಸ್ಲಿಂ ವಿಶ್ವವಿದ್ಯಾಲಯವಾಗಿ ಮಾರ್ಪಟ್ಟಿತು.

## ಶ್ರೀ ನಾರಾಯಣಗುರು



ಶ್ರೀ ನಾರಾಯಣಗುರು ಓರ್ವ ಪ್ರಮುಖ ಸಂತ ಮತ್ತು ಸಮಾಜ ಸುಧಾರಕರಾಗಿ ಪ್ರಸಿದ್ಧಿ ಹೊಂದಿದ್ದಾರೆ. ಅವರ 1854 ರಲ್ಲಿ ತಿರುವಾಂಕೂರಿನ 'ಈಳವ' ಸಮುದಾಯದ ಕುಟುಂಬವೊಂದರಲ್ಲಿ ಜನಿಸಿದರು. "ಶ್ರೀ ನಾರಾಯಣ ಧರ್ಮ ಪರಿಪಾಲನಾ ಯೋಗಂ" ಎಂಬ ಸಂಸ್ಥೆಯನ್ನು 1903 ರಲ್ಲಿ ಸ್ಥಾಪಿಸಿದರು. ಅದರ ಮೂಲಕ ಅವರು ಕೇರಳದ ಈಳವರು ಸೇರಿದಂತೆ ಹಿಂದುಳಿದ ಸಮುದಾಯಗಳ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಪ್ರಗತಿಗಾಗಿ ಶ್ರಮಿಸಿದರು. ಜಾತಿ ಪದ್ಧತಿಯನ್ನು, ಪ್ರಾಣಿಬಲಿಯನ್ನು ವಿರೋಧಿಸಿದರು. ಸಂಸ್ಕೃತ ಶಾಲೆಗಳನ್ನು ತೆರೆದು ಅಲ್ಲಿ ಜಾತಿಮತ ಭೇದರಹಿತವಾಗಿ ಎಲ್ಲರಿಗೂ ಪ್ರವೇಶ ನೀಡಿದರು. ಅವರು ಸುಮಾರು ಮೂವತ್ತು ದೇವಸ್ಥಾನಗಳನ್ನು ನಿರ್ಮಿಸಿದರು. ಕೇರಳದ ಅಸ್ಪೃಶ್ಯರೂ ಸೇರಿದಂತೆ ಎಲ್ಲಾ ಜಾತಿಯವರಿಗೂ ಪ್ರವೇಶ ಕಲ್ಪಿಸಿದರು. ದೇವಾಲಯಗಳಲ್ಲಿ ಎಲ್ಲ ಮತಧರ್ಮಗಳ ಗ್ರಂಥಗಳನ್ನು ಒಳಗೊಂಡ ಉತ್ತಮ ಗ್ರಂಥಾಲಯ ಇರಬೇಕೆಂದು ಬಯಸಿದರು. ಶ್ರೀ ನಾರಾಯಣಗುರು ಅವರ ಆಶಯವು ಈ ಹೇಳಿಕೆಯಲ್ಲಿ ವ್ಯಕ್ತವಾಗುತ್ತದೆ: "ಒಬ್ಬ ದೇವರು, ಒಂದು ಧರ್ಮ ಮತ್ತು ಒಂದು ಜಾತಿ" (one God, one Religion and one caste). ಇವರ ಪ್ರಭಾವ ಕರ್ನಾಟಕದ ಮೇಲೂ ಉಂಟಾಗಿರುವುದನ್ನು ಗಮನಿಸಬಹುದು. ನಾರಾಯಣಗುರು ಅವರ 1928 ರಲ್ಲಿ ನಿಧನರಾದರು.

ಚಟುವಟಿಕೆ: ಶ್ರೀ ನಾರಾಯಣಗುರು ಮತ್ತು ತಮಿಳುನಾಡಿನಲ್ಲಿ 1920ರ ದಶಕದಲ್ಲಿ ಆತ್ಮಗೌರವ ಚಳವಳಿಯನ್ನು ಪ್ರಾರಂಭಿಸಿದ ಪೆರಿಯಾರ್ ಅವರುಗಳನ್ನು ಕುರಿತು ಹೆಚ್ಚಿನ ಮಾಹಿತಿಯನ್ನು ಕಲೆ ಹಾಕಿರಿ.

ಮಹಿಳಾ ಸಮಾಜ ಸುಧಾರಕಿಯರು

ಮೇಡಂ ಹೆಚ್. ಪಿ. ಬ್ಲಾವಟ್‌ಸ್ಕಿ, ಅನಿಬೆಸೆಂಟ್, ಸಾವಿತ್ರಿಬಾಯಿಪುಲೆ, ತಾರಾಬಾಯಿಶಿಂದೆ, ಪಂಡಿತ್ ರಮಾಬಾಯಿ ಮುಂತಾದವರು ಭಾರತದ ಪ್ರಮುಖ ಸಾಮಾಜಿಕ ಸುಧಾರಕರು.

**ಸಾವಿತ್ರಿಬಾಯಿ ಪುಲೆ**



ಸಾವಿತ್ರಿಬಾಯಿ ಫುಲೆ ಭಾರತದ ಪ್ರಸಿದ್ಧ ಸಮಾಜ ಸುಧಾರಕರು, ಶೈಕ್ಷಣಿಕ ಸುಧಾರಕರು ಹಾಗೂ ಕವಯಿತ್ರಿ. ತಮ್ಮ ಪತಿ ಜ್ಯೋತಿ ಬಾ ಫುಲೆಯವರೊಡಗೂಡಿ ಪುಣೆಯಲ್ಲಿ ಬಾಲಕಿಯರ ಶಾಲೆಯನ್ನು ಆರಂಭಿಸಿದರಲ್ಲದೆ ತಾವೇ ಶಿಕ್ಷಕಿಯಾಗಿ ಕಾರ್ಯನಿರ್ವಹಿಸಿದರು. ಬಾಲ ವಿಧವೆಯವರಿಗಾಗಿ ಪುನರ್ ವಸತಿ ಕೇಂದ್ರಗಳನ್ನು ತೆರೆಯುವ ಮೂಲಕ ನಡೆಯುತ್ತಿದ್ದ ಶಿಶುಹತ್ಯೆಪ್ರಕರಣಗಳನ್ನು ಕೊನೆಗಾಣಿಸಲು ಪ್ರಯತ್ನ ಮಾಡಿದರು. ಜಾತಿ ಪದ್ಧತಿ ಮತ್ತು ಲಿಂಗ ಅಸಮಾನತೆಯ ವಿರುದ್ಧ ಹೋರಾಡಿದರು. ಅದಕ್ಕಾಗಿ ಅವರು ಸಮಾಜದ ವಿರೋಧವನ್ನು ಎದುರಿಸಬೇಕಾಯಿತು.

ಪತಿ ಜ್ಯೋತಿ ಬಾ ಫುಲೆಯ ಸಾಮಾಜಿಕ ಹೋರಾಟಗಳಲ್ಲಿ ಹೆಗಲಿಗೆ ಹೆಗಲುಗೊಟ್ಟು ದುಡಿದರು. ಅವರ ಸಾವಿನ ನಂತರ 'ಸತ್ಯ ಶೋಧಕ ಸಮಾಜ'ವನ್ನು ಮುನ್ನಡೆಸಿದರು. ಪ್ಲೇಗ್ ಮಹಾಮಾರಿಯ ರೋಗಕ್ಕೆ ತುತ್ತಾದವರ ಸೇವೆಯನ್ನು ತಮ್ಮ ಮಗನೊಡನೆ ಸೇರಿ ಮಾಡುತ್ತಿರುವಾಗಲೇ ಪ್ಲೇಗ್ ರೋಗಕ್ಕೆ ತುತ್ತಾದರು.

**ತಾರಾಬಾಯಿ ಶಿಂದೆ**



ತಾರಾ ಬಾಯಿ ಶಿಂದೆ

ತಾರಾಬಾಯಿ ಶಿಂದೆ ಮಹಾರಾಷ್ಟ್ರದ ಮೊದಲ ಮಹಿಳಾ ಹೋರಾಟಗಾರ್ತಿ. ಜ್ಯೋತಿ ಬಾ ಫುಲೆಯವರ ಸತ್ಯಶೋಧಕ ಸಮಾಜದ ಸಕ್ರಿಯ ಸದಸ್ಯರಾಗಿ ಸಾಮಾಜಿಕ ಹೋರಾಟಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಬಾಲವಿಧವೆಯರ ರಕ್ಷಣೆ ಮತ್ತು ವಿಧವಾ ಪುನರ್ವಿವಾಹಕ್ಕೆ ಬೆಂಬಲ ನೀಡಿದರು. ತಮ್ಮ ಕೃತಿ 'ಸ್ತ್ರೀ-ಪುರುಷ ತುಲನಾ'ದಲ್ಲಿ ಮಹಿಳೆಯ ಶೋಷಣೆಯನ್ನು ಉಗ್ರವಾಗಿ ಪ್ರತಿಭಟಿಸಿದ್ದಾರೆ.

**ಪಂಡಿತ್ ರಮಾಬಾಯಿ**



ಪಂಡಿತ್ ರಮಾಬಾಯಿ ಅವರು ಭಾರತದ ಪ್ರಸಿದ್ಧ ಕ್ರೈಸ್ತ ಸಮಾಜ ಸುಧಾರಕಿ. ಅನಂತಶಾಸ್ತ್ರಿ ಡೊಂಗ್ರೆ ಹಾಗೂ ಲಕ್ಷ್ಮೀಬಾಯಿ ದಂಪತಿಗಳ ಪುತ್ರಿಯಾಗಿ ಪಶ್ಚಿಮಘಟ್ಟದ ಗಂಗಾಮೂಲ ಎಂಬಲ್ಲಿ ಜನಿಸಿದರು. ಅಂದಿನ ಸಾಮಾಜಿಕ ಪರಿಸ್ಥಿತಿಗೆ ವಿರುದ್ಧವಾಗಿ ಶಿಕ್ಷಣ ಪಡೆದರು. ಇಂಗ್ಲೆಂಡಿನಲ್ಲಿ ಓದುವಾಗ ಕ್ರೈಸ್ತಧರ್ಮೀಯರಾದರು. ಭಾರತೀಯ ಮಹಿಳೆಯ ಉದ್ಧಾರಕ್ಕಾಗಿ ಜೀವನವನ್ನೇ ಮುಡುಪಿಟ್ಟು 1889 ರಲ್ಲಿ 'ಮುಕ್ತಿ ಮಿಷನ್' ಸಂಸ್ಥೆಯನ್ನು

ಹುಟ್ಟು ಹಾಕಿದರು. ಈ ಸಂಸ್ಥೆಯು ವಿಧವೆಯರು, ಅನಾಥರು ಹಾಗೂ ಕುಡುಕರಿಗೆ ಜೀವನೋಪಾಯ ಕಲ್ಪಿಸುತ್ತಾ ಇಂದಿಗೂ ಕಾರ್ಯಶೀಲವಾಗಿದೆ.

## ಅಭ್ಯಾಸಗಳು

### I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.

1. ಸಂವಾದ ಕೌಮುದಿ ಪತ್ರಿಕೆಯನ್ನು _______ ಅವರು ಆರಂಭಿಸಿದರು.
2. ಗುಲಾಮಗಿರಿ ಎಂಬ ಕೃತಿಯನ್ನು ರಚಿಸಿದವರು _______.
3. ಲಾಹೋರಿನಲ್ಲಿ 'ದಯಾನಂದ ಆಂಗ್ಲೋವೇದಿಕ್ ಶಾಲೆಯನ್ನು ಆರಂಭಿಸಿದವರು _______.
4. ಮಹಿಳೆಯರ ಉದ್ಧಾರಕ್ಕಾಗಿ 'ಮುಕ್ತಿಮಿಷನ್' ಸಂಸ್ಥೆಯನ್ನು ಸ್ಥಾಪಿಸಿದವರು _______.

### II. ಈ ಕೆಳಕಂಡ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

1. 'ಭಾರತದ ನವೋದಯ ಪಿತಾಮಹ' ಎಂದು ಯಾರನ್ನು ಕರೆಯುತ್ತಾರೆ?
2. ಮಹಾದೇವ ಗೋವಿಂದ ರಾನಡೆ ಯಾರು?
3. ಸತ್ಯಶೋಧಕ ಸಮಾಜದ ಸ್ಥಾಪಕರು ಯಾರು?
4. "ಏಳಿ! ಎದ್ದೇಳಿ! ಗುರಿ ಮುಟ್ಟುವ ತನಕ ನಿಲ್ಲದಿರಿ" ಇದು ಯಾರ ಕರೆಯಾಗಿತ್ತು?
5. ಅನಿಬೆಸೆಂಟ್ ಯಾರು?
6. ಅಲಿಘರ್ ಚಳುವಳಿಯ ನೇತಾರ ಯಾರಾಗಿದ್ದರು?
7. ಶ್ರೀ ನಾರಾಯಣಗುರು ಸ್ಥಾಪಿಸಿದ ಸಂಸ್ಥೆ ಯಾವುದು?
8. 'ಸ್ತ್ರೀಪುರುಷ ತುಲನಾ' ಕೃತಿಯ ಲೇಖಕಿ ಯಾರು?
9. ಭಾರತದ ಪ್ರಸಿದ್ಧ ಕ್ರೈಸ್ತ ಸಮಾಜ ಸುಧಾರಕಿ ಯಾರು?

### III. ಈ ಕೆಳಕಂಡ ಪ್ರಶ್ನೆಗಳಿಗೆ ಗುಂಪುಗಳಲ್ಲಿ ಚರ್ಚಿಸಿ ಉತ್ತರಿಸಿರಿ.

1. ರಾಮಮೋಹನ್ ರಾಯರ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣ ಕ್ರಮಗಳನ್ನು ತಿಳಿಸಿ.
2. ಸಮಾಜ ಸುಧಾರಣೆಯಲ್ಲಿ ಜ್ಯೋತಿ ಬಾಪುಲೆಯವರ ಪಾತ್ರವೇನು?
3. ಥಿಯಸಾಫಿಕಲ್ ಸೊಸೈಟಿಯ ಉದ್ದೇಶಗಳೇನು?
4. ಮುಸ್ಲಿಂ ಸಮುದಾಯವನ್ನು ಸುಧಾರಿಸುವಲ್ಲಿ ಸಯ್ಯದ್ ಅಹ್ಮದ್ ಖಾನರ ಪಾತ್ರವೇನು?
5. ಹಿಂದುಳಿದ ಸಮುದಾಯಗಳನ್ನು ಸುಧಾರಿಸುವಲ್ಲಿ ನಾರಾಯಣ ಗುರು ಕೈಗೊಂಡ ಕ್ರಮಗಳೇನು?
6. ಮಹಿಳಾ ಸುಧಾರಣೆಯಲ್ಲಿ ಪಂಡಿತ್ ರಮಾಬಾಯಿ ಅವರ ಪಾತ್ರವೇನು?

### IV. ಈ ಕೆಳಗಿನ 'ಎ' ಪಟ್ಟಿಗೆ ಸಂಬಂಧಿಸಿದ 'ಬಿ' ಪಟ್ಟಿಯಲ್ಲಿನ ವಿಷಯಗಳನ್ನು ಹೊಂದಿಸಿ ಬರೆಯಿರಿ.

| ಎ | ಬಿ |
|---|---|
| 1. ಸ್ವಾಮಿ ವಿವೇಕಾನಂದ | a. ಅಲಿಘರ್ ಚಳವಳಿ |
| | |

| 2. ಸ್ವಾಮಿ ದಯಾನಂದ ಸರಸ್ವತಿ | b. ಸತ್ಯಶೋಧಕ ಸಮಾಜ |
|---|---|
| 3. ಸಯ್ಯದ್ ಅಹ್ಮದ್‌ಖಾನ್ | c. ಥಿಯಸಾಫಿಕಲ್ ಸೊಸೈಟಿ |
| 4. ಜ್ಯೋತಿ ಬಾಫುಲೆ | d. ರಾಮಕೃಷ್ಣ ಮಿಷನ್ |
| 5. ಅನಿಬೆಸೆಂಟ್ | e. ಆರ್ಯಸಮಾಜ |

**V. ಚರ್ಚಿಸಿ**

"ಸ್ತ್ರೀಯರ ಉದಾರ ನಮ್ಮ ರಾಷ್ಟ್ರದ ಉದ್ಧಾರ" ಸ್ವಾಮಿ ವಿವೇಕಾನಂದರ ಈ ಮಾತು ಇಂದಿಗೂ ಪ್ರಸ್ತುತವೇ? ಗುಂಪಾಗಿ ಚರ್ಚಿಸಿರಿ.

**ಚಟುವಟಿಕೆ**

ಎಂ. ಜಿ. ರಾನಡೆ, ಜ್ಯೋತಿಬಾ ಫುಲೆ, ರಾಜಾ ರಾಮಮೋಹನರಾಯ್, ಸ್ವಾಮಿ ವಿವೇಕಾನಂದ, ಸ್ವಾಮಿ ದಯಾನಂದಸರಸ್ವತಿ, ಸರ್ ಸಯ್ಯದ್ ಅಹ್ಮದ್‌ಖಾನ್ ಮತ್ತು ಶ್ರೀ ನಾರಾಯಣಗುರು ಇವರು ಜೀವನ ಚರಿತ್ರೆಗಳನ್ನು ಓದಿರಿ.

## ಪಾಠ-13: ಸ್ವಾತಂತ್ರ್ಯ ಹೋರಾಟಗಳು

### ಪಾಠದ ಪರಿಚಯ

ಭಾರತೀಯರು ತಮ್ಮ ಸ್ವಾತಂತ್ರ್ಯಕ್ಕಾಗಿ ಅನೇಕ ಹೋರಾಟಗಳನ್ನು ಮಾಡಿದರು. ಭಾರತೀಯ ಇತಿಹಾಸದಲ್ಲಿ ಇದೊಂದು ಮಹತ್ವದ ಮೈಲಿಗಲ್ಲು. ಭಾರತದಲ್ಲಿ ಪೋರ್ಚ್‍ಗೀಸರು, ಡಚ್ಚರು, ಫ್ರೆಂಚರು ಮತ್ತು ಬ್ರಿಟಿಷರು ತಮ್ಮ ವ್ಯಾಪಾರದ ನೆಲೆಗಳನ್ನು ಸ್ಥಾಪಿಸಿದರು. ಭಾರತೀಯರನ್ನು ನಿರಂತರವಾಗಿ ಶೋಷಣೆಗೊಳಪಡಿಸಿದರು. ಅವರ ಆಕ್ರಮಣಕಾರಿ ನೀತಿ, ಅನ್ಯಾಯ, ಆರ್ಥಿಕ ಶೋಷಣೆಯ ವಿರುದ್ಧ ಭಾರತೀಯರು ತೊಡೆತಟ್ಟಿ ನಿಂತರು. ಬ್ರಿಟಿಷರನ್ನು ಭಾರತದಿಂದ ಹೊರಹಾಕಬೇಕೆಂಬ ಸಂಕಲ್ಪ ತೊಟ್ಟರು. ಹೋರಾಟಕ್ಕೆ ಅಣಿಯಾದರು. ಈ ಹೋರಾಟದ ವಿವಿಧ ಮಜಲುಗಳನ್ನು ಇಲ್ಲಿ ವಿವರಿಸಲಾಗಿದೆ.

### ಸಾಮರ್ಥ್ಯಗಳು

1. ಬ್ರಿಟಿಷರ ವಿರುದ್ಧ ನಡೆದ ಆರಂಭಿಕ ಪ್ರತಿಭಟನೆಗಳನ್ನು ಅರಿಯುವುದು.
2. 1857ರ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕಾರಣವಾದ ಅಂಶಗಳನ್ನು ತಿಳಿಯುವುದು.
3. ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಟ ನಡೆಸಿದ ಪ್ರಮುಖ ನಾಯಕರ ಹೋರಾಟವನ್ನು ಸ್ಮರಿಸುವುದು.
4. 19 ನೇ ಶತಮಾನದಲ್ಲಿ ರಾಷ್ಟ್ರೀಯತೆಯ ಬೆಳವಣಿಗೆಗೆ ಕಾರಣವಾದ ಪ್ರಮುಖ ಅಂಶಗಳನ್ನು ಅರಿಯುವುದು.
5. ಮಂದಗಾಮಿಗಳು, ತೀವ್ರಗಾಮಿಗಳು ಮತ್ತು ಕ್ರಾಂತಿಕಾರಿಗಳ ತಾತ್ವಿಕ ನಿಲುವು, ನೀತಿಗಳನ್ನು ಅರ್ಥೈಸಿಕೊಳ್ಳುವುದು.
6. ಬ್ರಿಟಿಷರ ವಿರುದ್ಧ ಗಾಂಧೀಜಿಯವರು ಪ್ರಯೋಗಿಸಿದ ಅಹಿಂಸಾ ಮತ್ತು ಸತ್ಯಾಗ್ರಹ ನೀತಿಯನ್ನು ಪ್ರಶಂಸಿಸುವುದರ ಮೂಲಕ ಹೆಮ್ಮೆಪಡುವುದು.
7. ಗಾಂಧೀಜಿಯವರ ನಾಯಕತ್ವದ ಗುಣ, ಧೈರ್ಯ, ಸತ್ಯ, ಸರಳತೆ, ಮಾನವೀಯತೆ ಮತ್ತು ವಿನಯಗಳನ್ನು ಮೆಚ್ಚುವುದು.

### ಬ್ರಿಟಿಷರ ವಿರುದ್ಧ ನಡೆದ ಆರಂಭಿಕ ಪ್ರತಿಭಟನೆಗಳು

ಬ್ರಿಟಿಷರ ಪ್ರಾಬಲ್ಯದ ವಿರುದ್ಧ ಭಾರತೀಯರು ಪ್ರತಿಭಟಿಸಿದರು. ಬಂಗಾಳದ ನವಾಬ ಮೀರ್ ಜಾಫರ್‌ನು ಬ್ರಿಟಿಷರ ಆಸೆ ಆಕಾಂಕ್ಷೆಗಳನ್ನು ಈಡೇರಿಸಲು ವಿಫಲನಾದ್ದರಿಂದ ಅಧಿಕಾರದಿಂದ ವಜಾಗೊಳಿಸಿದನು. ಆತನ ಅಳಿಯ ಮೀರಖಾಸಿಂನಿಗೆ ತಾತ್ಕಾಲಿಕ ಅಧಿಕಾರ ನೀಡಿ ಆಸೆ ತೋರಿಸಿ ವಂಚಿಸಿದರು. ಅಲ್ಲದೆ ಸಾ. ಶ 1767 ರಿಂದ 1799ರ ವರೆಗೆ ಆಂಗ್ಲೋ-ಮೈಸೂರು ಯುದ್ಧಗಳು, ಸಾ. ಶ 1775 ರಿಂದ 1818 ವರೆಗೆ ಆಂಗ್ಲೋ-ಮರಾಠ ಯುದ್ಧಗಳು ನಡೆದವು.

ಬ್ರಿಟಿಷರು ಸಿಖ್ಖರು, ಆಫ್ಘನ್ನರು, ನೇಪಾಳಿಗಳು, ಬರ್ಮಿಯರ ಮೇಲೆ ಯುದ್ಧಗಳನ್ನು ಮಾಡಿ ಭಾರತೀಯ ಉಪಖಂಡದ ಮೇಲೆ ತಮ್ಮ ರಾಜಕೀಯ ಪ್ರಭುತ್ವವನ್ನು ಸ್ಥಾಪಿಸಿದರು. ಕರ್ನಾಟಕದಲ್ಲೂ ಇಂತಹ ಅನೇಕ ಹೋರಾಟಗಳು ನಡೆದವು.

ಸಾ. ಶ. 1800 ರಲ್ಲಿ ದೊಂಡಿಯವಾಘನು ಬ್ರಿಟಿಷರ ವಿರುದ್ಧ ದಂಗೆ ಎದ್ದನು. ಆದರೆ ಬ್ರಿಟಿಷರು ಮರಾಠ ಮತ್ತು ನಿಜಾಮರ ಸಹಾಯದಿಂದ ವಾಘನನ್ನು ಬಂಧಿಸಿದ ಅರ್ಥರ್ ವೆಲ್ಲೆಸ್ಲಿ ಕೋನಗನ್‌ನಲ್ಲಿ ಕೊಂದನು. ಸಾ. ಶ 1819 ರಲ್ಲಿ ಕೊಪ್ಪಳದಲ್ಲಿ ವೀರಪ್ಪ ಎಂಬ ಜಮೀನ್ದಾರನು ನಿಜಾಮನ ವಿರುದ್ಧ ದಂಗೆ ಎದ್ದನು. ಆದರೆ ಬ್ರಿಟಿಷರು ಈತನನ್ನು ಸದೆಬಡಿದರು.

ಸಾ. ಶ 1824 ರಲ್ಲಿ ಬಿಜಾಪುರ ಜಿಲ್ಲೆಯ ಸಿಂದಗಿಯಲ್ಲಿ ದಿವಾಕರ ದೀಕ್ಷಿತ ಮತ್ತು ಬಾಲಾಜಿ ದೇಶಪಾಂಡೆಯವರು ಬ್ರಿಟಿಷರ ವಿರುದ್ಧ ದಂಗೆ ಎದ್ದು ಅಲ್ಲಿ ಸ್ವತಃ ತಾವೇ ಕಂದಾಯ ಸಂಗ್ರಹಿಸಿದರು. ಆದರೆ ಬ್ರಿಟಿಷರು ಇದನ್ನು ತಡೆದು ಇವರನ್ನು ಸೆರೆಮನೆಗೆ ತಳ್ಳಿದರು. ಸಾ. ಶ 1824 ರಿಂದ 1830 ರಲ್ಲಿ ಬೆಳಗಾವಿ ಜಿಲ್ಲೆಯ ಕಿತ್ತೂರಿನಲ್ಲಿ ಬ್ರಿಟಿಷರ ವಿರುದ್ಧ ರಾಣಿ ಚೆನ್ನಮ್ಮ ಮತ್ತು ನಿಷ್ಠಾವಂತ ಸೇವಕ ಸಂಗೊಳ್ಳಿ ರಾಯಣ್ಣರು ವೀರಾವೇಶದಿಂದ ಹೋರಾಡಿ ವೀರ ಸ್ವರ್ಗನ್ನು ಕಂಡರು. ಇದರೊಂದಿಗೆ ಬಾದಾಮಿ, ಬಿದನೂರಿನ ನಗರ ದಂಗೆ ಮತ್ತು ಕೊಡಗು ಬಂಡಾಯ ಪ್ರಮುಖವಾಗಿ ನಡೆದವು. ಆದರೆ ಬ್ರಿಟಿಷರು ಸುಲಭವಾಗಿ ಭಾರತೀಯರ ಪ್ರತಿಭಟನೆಗಳನ್ನು ನಿಯಂತ್ರಿಸಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡರು.

ಇಲ್ಲಿ ನಡೆದ ಭಾರತದ ಸ್ವಾತಂತ್ರ್ಯದ ಪ್ರತಿಭಟನೆಗಳು ಸಶಸ್ತ್ರ ಬಂಡಾಯದ ಪ್ರತಿಭಟನೆಗಳೆಂದು ಗುರುತಿಸಿಕೊಂಡಿವೆ. ಇಂತಹ ಅನೇಕ ಪ್ರತಿಭಟನೆಗಳು ಭಾರತದ ಪ್ರಥಮ ಸ್ವಾತಂತ್ರ್ಯಸಂಗ್ರಾಮಕ್ಕೆ ನಾಂದಿಯಾದವು.

ಭಾರತದ ಪ್ರಥಮ ಸ್ವಾತಂತ್ರ್ಯಸಂಗ್ರಾಮ (ಸಾ. ಶ. 1857-58)

ಆಧುನಿಕ ಭಾರತದ ಇತಿಹಾಸದಲ್ಲಿ ಸಾ.ಶ. 1857ರ ವರ್ಷ ಒಂದು ಪ್ರಮುಖ ಐತಿಹಾಸಿಕ ಮೈಲಿಗಲ್ಲಾಗಿದೆ. ಬ್ರಿಟಿಷರು ಸಾ.ಶ. 1857ರ ಐತಿಹಾಸಿಕ ಘಟನೆಯನ್ನು ಕೇವಲ 'ಸಿಪಾಯಿಗಳ ದಂಗೆ' ಎಂದು ಪರಿಗಣಿಸಿದರೆ, ಭಾರತೀಯ ರಾಷ್ಟ್ರೀಯವಾದಿಗಳು 'ಭಾರತದ ಪ್ರಥಮ ಸ್ವಾತಂತ್ರ್ಯಸಂಗ್ರಾಮ' ಎಂದು ಸಾರಿದರು. ಇದು ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರುದ್ಧ ನಡೆದ ಮಹಾಹೋರಾಟವಾಗಿತ್ತು. ಸಿಪಾಯಿಗಳು ಮತ್ತು ನಾಗರಿಕರು ಸಾಮ್ರಾಜ್ಯಶಾಹಿ ಧೋರಣೆಗಳನ್ನು ಬೇರುಸಹಿತ ಕಿತ್ತೊಗೆಯಲು ಬಯಸಿದರು.

**ಕಾರಣಗಳು**

ಬ್ರಿಟಿಷರ ದೀರ್ಘಾವಧಿಯ ಆಡಳಿತದಿಂದ ಭಾರತದ ಆರ್ಥಿಕ ವ್ಯವಸ್ಥೆಯು ದುರ್ಬಲಗೊಂಡಿತ್ತು. ಜನತೆಯು ತೀವ್ರ ಸಂಕಷ್ಟಕ್ಕೆ ಒಳಗಾಗಿದ್ದರು. ರೈತರು ತೆರಿಗೆಗಳ ಭಾರಕ್ಕೆ ಕುಸಿದಿದ್ದರು. ಕರಕುಶಲ ಕೈಗಾರಿಕೆಗಳು ನಾಶವಾಗತೊಡಗಿ, ಪರಂಪರಾಗತವಾಗಿ ನಂಬಿಕೊಂಡು ಬಂದಿದ್ದ ವೃತ್ತಿಗಳು ಶಕ್ತಿಯನ್ನು ಕಳೆದುಕೊಂಡು ಜನರು ಬೀದಿಪಾಲಾದರು. ಹೀಗಾಗಿ ಬ್ರಿಟಿಷರ ವಿರುದ್ಧ ಸಂಗ್ರಾಮಕ್ಕೆ ಅಣಿಯಾದರು. ಈ ಹೋರಾಟಕ್ಕೆಪ್ರೇರಣೆಯಾದ

ಅಂಶಗಳನ್ನು ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ಆಡಳಿತಾತ್ಮಕ ಮತ್ತು ಸೈನಿಕ ಕಾರಣಗಳೆಂದು ವಿಂಗಡಿಸಬಹುದು.

**1. ರಾಜಕೀಯ ಕಾರಣ**

ಲಾರ್ಡ್ ವೆಲ್ಲೆಸ್ಲಿಯ 'ಸಹಾಯಕ ಸೈನ್ಯ ಪದ್ಧತಿ' ಮತ್ತು ಲಾರ್ಡ್ ಡಾಲ್‌ಹೌಸಿಯ 'ದತ್ತುಮಕ್ಕಳಿಗೆ ಹಕ್ಕಿಲ್ಲ'ವೆಂಬ ನೀತಿಗಳಿಂದಾಗಿ ಅನೇಕ ಅರಸರು ಮತ್ತು ನವಾಬರು ಪದಚ್ಯುತಿಗೊಳ್ಳುವಂತಾಯಿತು. ಸತಾರ, ಜೈಪುರ, ಸಂಬಲ್‌ಪುರ, ಉದಯಪುರ, ಝೂನ್ಸಿ, ಅವಧ್ ಇವೇ ಮೊದಲಾದ ಪ್ರದೇಶಗಳು ಡಾಲ್‌ಹೌಸಿಯ ನೀತಿಗೆ ಬಲಿಯಾದ ರಾಜ್ಯಗಳು. ಅಲ್ಲದೆ ಕೆಲವು ರಾಜರ ವಿಶ್ರಾಂತಿ ವೇತನ ತಡೆಹಿಡಿಯಲಾಯಿತು. ರಾಜರ ಬಿರುದುಗಳು ರದ್ದಾದವು. ಇವು ಸಹಜವಾಗಿಯೇ ಭಾರತೀಯ ಆಳುವ ವರ್ಗ ಮತ್ತು ಜನರ ಭಾವನೆಗಳಿಗೆ ಆಘಾತವನ್ನುಂಟು ಮಾಡಿತು.

2. **ಆಡಳಿತಾತ್ಮಕ ಕಾರಣ**

ಬ್ರಿಟಿಷರು ಎಲ್ಲಾ ನಾಗರಿಕ ಮತ್ತು ಸೈನಿಕ ಉನ್ನತ ಹುದ್ದೆಗಳನ್ನು ಯುರೋಪಿಯನ್‌ರಿಗೆ ಮೀಸಲಿಡುವ ಉದ್ದೇಶದಿಂದ ಹೊಸ ಆಡಳಿತ ವ್ಯವಸ್ಥೆಯನ್ನು ರೂಪಿಸಿದರು. ಆಡಳಿತದಲ್ಲಿ ಮಧ್ಯವರ್ತಿಗಳ ಹಾವಳಿ ಹೆಚ್ಚಾಗಿತ್ತು. ಕಾನೂನಿನ ಆಳ್ವಿಕೆಯು ಸಾಮಾಜಿಕ ಶ್ರೇಣಿ ವ್ಯವಸ್ಥೆಯ ಕುಸಿತಕ್ಕೆ ದಾರಿಮಾಡಿಕೊಟ್ಟಿತು. ಪರ್ಷಿಯನ್ ಭಾಷೆಗೆ ಬದಲಾಗಿ ಇಂಗ್ಲಿಷ್ ನ್ಯಾಯಾಲಯದ ಭಾಷೆಯಾಗಿದ್ದು ಜನತೆಗೆ ಮತ್ತು ಭಾರತೀಯ ಆಳುವ ವರ್ಗಕ್ಕೆ ಸರಿಹೊಂದಲಿಲ್ಲ.

3. **ಆರ್ಥಿಕ ಕಾರಣ**



ಬಹಾದ್ದೂರ್ ಷಹ

ಬ್ರಿಟಿಷರು ತಮ್ಮ ಲಾಭಕ್ಕಾಗಿ ಭಾರತದ ಆರ್ಥಿಕ ಸಂಪತ್ತನ್ನು ದೋಚುವುದಕ್ಕಾಗಿ ತಮ್ಮ ರಾಜಕೀಯ ಅಧಿಕಾರವನ್ನು ಬಳಸಿಕೊಂಡರು. ಬ್ರಿಟಿಷರ ವ್ಯಾಪಾರಿ ಹಿತಾಸಕ್ತಿಯಿಂದಾಗಿ ಭಾರತೀಯ ಗುಡಿ ಕೈಗಾರಿಕೆ ಮತ್ತು ಸ್ಥಳೀಯ ಕೈಗಾರಿಕೆಗಳು ನಾಶ ಹೊಂದಿದವು. ಭೂಕಂದಾಯ ನೀತಿಯು ಅತ್ಯಂತ ಶೋಷಣಾತ್ಮಕವಾಗಿತ್ತು. ತಾಲ್ಲೂಕುದಾರರ ಮತ್ತು ಜಮೀನ್ದಾರರ ಸ್ಥಾನಮಾನ ಮತ್ತು ವರಮಾನದ ಮೂಲವನ್ನು ಕಿತ್ತುಕೊಳ್ಳಲಾಯಿತು. ದೊಡ್ಡ ಪ್ರಮಾಣದ ಸಂಪತ್ತಿನ ಹೊರಹರಿವು ಸೃಷ್ಟಿಯಾಯಿತು. ವ್ಯವಸಾಯದ ವಾಣಿಜ್ಯೀಕರಣದಿಂದಾಗಿ ರೈತರ ಆರ್ಥಿಕ ಶಕ್ತಿಯು ಬಹಾದೂರ್ ಷಹ ಕ್ಷೀಣಿಸಿತು. ಅಂದಿನತೀವ್ರ ಬರಗಾಲಗಳು ಲಕ್ಷಾಂತರ ಜನರನ್ನು ಬಲಿತೆಗೆದುಕೊಂಡವು. ಇವೇ ಮುಂತಾದ ಅಂಶಗಳು ಭಾರತವನ್ನು ಬಡತನಕ್ಕೆ ತಳ್ಳಿದವು.



### 4. ಸಾಮಾಜಿಕ ಮತ್ತು ಧಾರ್ಮಿಕ ಕಾರಣ

ಸಾಮಾಜಿಕ ಮತ್ತು ಧಾರ್ಮಿಕ ಅಂಶಗಳು ಸಹ ದಂಗೆಯ ಸ್ಫೋಟಕ್ಕೆ ಕಾರಣವಾದವು. ಬ್ರಿಟಿಷರು ಭಾರತೀಯರನ್ನು "ಸಂಸ್ಕೃತಿ ಮತ್ತು ನಾಗರಿಕತೆಯ ಗಂಧವಿಲ್ಲದ ಅನಾಗರಿಕರು" ಎಂದರು. ಭಾರತೀಯರನ್ನು 'ಹಂದಿ', 'ಕರಿ ಮನುಷ್ಯ'ರು ಸಂಬೋಧಿಸುತ್ತಿದ್ದರು. ಯೂರೋಪಿಯನ್‌ರ ಮೇಲುಸ್ತುವಾರಿಯಲ್ಲಿದ್ದ ಹೋಟೇಲ್ ಮತ್ತು ಕ್ಲಬ್‌ಗಳಿಗೆ ಭಾರತೀಯರಿಗೆ ಪ್ರವೇಶವಿರಲಿಲ್ಲ. "ನಾಯಿಗಳಿಗೆ ಮತ್ತು ಭಾರತೀಯರಿಗೆ ಪ್ರವೇಶವು ನಿಷಿದ್ಧ" ಎಂಬ ನಾಮಫಲಕಗಳನ್ನು ದ್ವಾರದಲ್ಲಿ ತೂಗುಹಾಕುತ್ತಿದ್ದರು. ಮೇಲಾಗಿ ಸತಿಪದ್ಧತಿ ಮತ್ತು ಬಾಲ್ಯವಿವಾಹ ನಿಷೇಧ, ವಿಧವಾ ಪುನರ್ ವಿವಾಹಕ್ಕೆ ಪ್ರೋತ್ಸಾಹ ಇವೆಲ್ಲವುಗಳಿಂದ ಭಾರತೀಯರು ತಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಬ್ರಿಟಿಷರು ಮಾಡುತ್ತಿರುವ ಹಸ್ತಕ್ಷೇಪ ಎಂದು ಭಾವಿಸಿದರು. ಅಷ್ಟೇ ಅಲ್ಲದೆ ರೈಲ್ವೆಯ ಆಗಮನವು ಮಡಿವಂತ ಭಾರತೀಯರಿಗೆ ನುಂಗಲಾರದ ತುತ್ತಾಯಿತು. ಎಲ್ಲಾ ವರ್ಗದ ಜನರು ಒಂದೇ ಬೋಗಿಯಲ್ಲಿ ಪ್ರಯಾಣ ಮಾಡಬೇಕಾದುದು ಮೇಲ್ವರ್ಗದವರಲ್ಲಿ ಸಿಟ್ಟು ತರಿಸಿತು.

### 5. ಸೈನಿಕ ಕಾರಣ

ಭಾರತೀಯ ಸೈನಿಕರಲ್ಲಿ ಅನೇಕ ಅಸಂತೃಪ್ತಿಗಳಿದ್ದವು. ಸೈನಿಕರು ಪಾರಂಪರಿಕವಾಗಿ ಬಳಸುತ್ತಿದ್ದ ಧಾರ್ಮಿಕ ಚಿಹ್ನೆ ಮತ್ತು ಪೇಟಗಳನ್ನು ಧರಿಸಬಾರದೆಂಬ ನಿಷೇಧಕ್ಕೊಳಪಟ್ಟಿದ್ದರು. ಭಾರತೀಯ ಸೈನಿಕರಿಗೆ ಅತ್ಯಂತ ಕಡಿಮೆ ವೇತನ ನೀಡುತ್ತಿದ್ದರು. ಮುಂಬಡ್ತಿಯ ಅವಕಾಶಗಳು ಇಲ್ಲದಾಗಿದ್ದವು. ಬ್ರಿಟಿಷ್ ಸೈನಿಕರಿಗೆ ಮಾತ್ರ ಹೆಚ್ಚಿನ ಸಂಬಳ ಮತ್ತು ಇತರೆ ಸೌಲಭ್ಯಗಳನ್ನು ನೀಡಲಾಗಿತ್ತು. ಭಾರತೀಯ ಸೈನಿಕರನ್ನು ಕಾರ್ಯನಿಮಿತ್ತ ಹೆಚ್ಚುವರಿ ವೇತನ ನೀಡದೆ ಅತ್ಯಂತ ದೂರ ಪ್ರದೇಶಗಳಿಗೆ ನಿಯೋಜಿಸಲಾಗುತ್ತಿತ್ತು. ಲಾರ್ಡ್ ಕ್ಯಾನಿಂಗನ "ಸಾಮಾನ್ಯ ಸೇನಾಸೇವಾ ಕಾಯಿದೆ"ಯ ಪ್ರಕಾರ ಎಲ್ಲಾ ಸೈನಿಕರು ಬ್ರಿಟಿಷ್ ಆದೇಶದಂತೆ ಎಲ್ಲೆಂದರಲ್ಲಿ ಕಾರ್ಯನಿಮಿತ್ತ ತೆರಳಬೇಕಿತ್ತು. ಇವೆಲ್ಲವೂ ಭಾರತೀಯ ಸೈನಿಕರಲ್ಲಿ ಅಸಹನೆಯನ್ನು ಉಂಟುಮಾಡಿದವು.

### 6. ತಕ್ಷಣದ ಕಾರಣ

ಜನಸಮೂಹದ ದಂಗೆಗೆ ಕಾಲ ಸನಿಹಿತವಾಗಿತ್ತು. ಅವರಲ್ಲಿ ಕಿಚ್ಚೆಬ್ಬಿಸಲು ಒಂದೇ ಒಂದು ಕಿಡಿ ಸಾಕಾಗಿತ್ತು. ಸಾ. ಶ. 1857 ರಲ್ಲಿ ಒಂದು ಹೊಸ ಮಾದರಿಯ ಬಂದೂಕನ್ನು (ಎನ್‌ಫೀಲ್ಡ್ ರೈಫಲ್) ಸೇನೆಯಲ್ಲಿ ತೊಡಗಿಸಿದ್ದು ಸಿಪಾಯಿ ದಂಗೆಗೆ ತಕ್ಷಣದ ಕಾರಣವಾಯಿತು. ಎನ್‌ಫೀಲ್ಡ್ ಬಂದೂಕುಗಳಿಗೆ ತೋಟಾ (ಕಾರ್ಟ್‌ರಿಡ್ಜ್) ಗಳನ್ನು ತುಂಬುವ ಮುನ್ನ ಅದಕ್ಕೆ ಹೊದಿಸಿದ ಕಾಗದವನ್ನು ಹಲ್ಲಿನಿಂದ ಕಚ್ಚಿ ಹರಿಯಬೇಕಿತ್ತು. ಈ ಕಾಗದಕ್ಕೆ ಹಂದಿ ಮತ್ತು ಗೋವಿನ ಕೊಬ್ಬು ಬಳಸಲಾಗಿದೆ ಎಂಬ ಸುದ್ದಿ ಕಾಳ್ಗಿಚ್ಚಿನಂತೆ ಸೈನಿಕರಲ್ಲಿ ಹಬ್ಬಿತು. ಇದು ಮುಸ್ಲಿಂ ಮತ್ತು ಹಿಂದೂ ಸಿಪಾಯಿಗಳ ಧಾರ್ಮಿಕ ಭಾವನೆಗಳಿಗೆ ಧಕ್ಕೆಯುಂಟು ಮಾಡುವುದಾಗಿತ್ತು. ಅವುಗಳನ್ನು ಬಳಸಲು ನಿರಾಕರಿಸಿದ ಸೈನಿಕರು ಬ್ರಿಟಿಷರಿಂದ ಶಿಕ್ಷೆಗೊಳಗಾದರು.

## ದಂಗೆಯ ಗತಿ



ಮೀರತ್‌ನಲ್ಲಿ ದಂಗೆಯು ಸಾ. ಶ. 1857 ರ ಮೇ 10 ರಂದು ಆರಂಭವಾಯಿತು. ಆನಂತರ ಉತ್ತರ ಭಾರತದ ಪ್ರಾಂತ್ಯಗಳಾದ್ಯಂತ ವ್ಯಾಪಕವಾಗಿ ತೀವ್ರಗೊಂಡಿತು. ಮೀರತ್‌ನಲ್ಲಿ ದಂಗೆ ಸ್ಫೋಟಗೊಳ್ಳುವ ಮೊದಲೇ ಬ್ಯಾರಕ್‌ಪುರದ (ಬಂಗಾಲ) ಭಾರತೀಯ ಸಿಪಾಯಿ ಮಂಗಲ್‌ಪಾಂಡೆ ಕೊಬ್ಬು ಸವರಿದ ಬಂದೂಕನ್ನು ಬಳಸಲು ತಿರಸ್ಕರಿಸಿ, ಬಹಿರಂಗವಾಗಿಯೇ ಬ್ರಿಟಿಷ್ ಅಧಿಕಾರಿಯೊಬ್ಬನಿಗೆ ಗುಂಡಿಕ್ಕಿಕೊಂದನು. ನಂತರ ಅವನು ಸಹ ಕೊಲ್ಲಲ್ಪಟ್ಟನು. ಆಗ ಮೀರತ್‌ನಲ್ಲಿ ಕಣ್ಣಿಗೆ ಬಿದ್ದ ಪ್ರತಿಯೊಬ್ಬ ಯೂರೋಪಿಯನರನ್ನು ಸಿಪಾಯಿಗಳು ಕೊಂದರು. 'ಮಾರೋ ಫರಂಗಿಕೋ' (ಯುರೋಪಿಯನರನ್ನು ಕೊಲ್ಲಿ) ಎಂದು ಉದ್ರಿಕ್ತರು ಕೂಗುತ್ತಾ ದಿಲ್ಲಿಯ ಕಡೆಗೆ ಧಾವಿಸಿದರು. ದಿಲ್ಲಿಯಲ್ಲಿ ಸಿಪಾಯಿಗಳು ವಯೋವೃದ್ಧ ಹಾಗೂ ದುರ್ಬಲ ಮೊಗಲ್ ದೊರೆ ಎರಡನೇ ಬಹಾದೂರ್ ಷಾನನ್ನು ಭಾರತದ ಚಕ್ರವರ್ತಿ ಎಂದು ಘೋಷಣೆ ಮಾಡಿದರು.

ದಿಲ್ಲಿಯಲ್ಲಿ ಸೇನಾಪತಿ ಬಖ್ತ್‌ಖಾನ್, ಕಾನ್ಪುರದಲ್ಲಿ ನಾನಾ ಸಾಹೇಬ್ ಮತ್ತು ತಾಂತ್ಯಾ ಟೋಪೆ, ಲಕ್ನೋದಲ್ಲಿ ಬೇಗಮ್ ಹಜ್ರತ್ ಮಹಲ್, ಝಾನ್ಸಿಯಲ್ಲಿ ಲಕ್ಷ್ಮೀಬಾಯಿ ಮತ್ತು ಬಿಹಾರದಲ್ಲಿ ಕುಂವರ್ ಸಿಂಗ್‌ರವರ ನೇತೃತ್ವದಲ್ಲಿ ದಂಗೆಗಳು ನಡೆದವು. ಬ್ರಿಟಿಷರು ದಂಗೆಯನ್ನು ಒಂದೊಂದಾಗಿ ದಮನಮಾಡಿದರು. ಬಂಡಾಯವು ಉತ್ತರ ಭಾರತಕ್ಕೆ ಸೀಮಿತವಾಗಿರದೆ, ದಕ್ಷಿಣ ಭಾರತಕ್ಕೂ ಹಬ್ಬಿತು. ಕರ್ನಾಟಕದಲ್ಲಿ ಮುಂಡರಗಿ ಭೀಮರಾವ್, ಹಲಗಲಿ ಬೇಡರು, ಸುರಪುರದ ನಾಲ್ವನೇ ವೆಂಕಟಪ್ಪ ನಾಯಕ ಮತ್ತು ನರಗುಂದದ ಬಾಬಾಸಾಹೇಬ ಮುಖ್ಯ ನಾಯಕರಾಗಿದ್ದರು. ಉತ್ತರ ಮತ್ತು ದಕ್ಷಿಣ ಭಾರತದ ಎಲ್ಲೆಡೆ ಬಂಡಾಯವು ವ್ಯಾಪಕವಾಗಿ ನಡೆದರೂ ಕೂಡ ಅಲ್ಪ ಸಮಯದೊಳಗೆ ಬ್ರಿಟಿಷರು ದಂಗೆಯನ್ನು ದಮನ ಮಾಡಿದರು.

ಫರಂಗಿ: ಫರಂಗಿ ಪದವು ಪರ್ಷಿಯನ್ ಮೂಲದ್ದಾಗಿದೆ. ಇದನ್ನು ಉರ್ದು ಮತ್ತು ಹಿಂದಿಗಳಲ್ಲಿ

ಯೂರೋಪಿಯನರನ್ನು ಕೀಳಾಗಿ ಸೂಚಿಸಲು ಬಳಸಲಾಗುತ್ತಿತ್ತು.

ಅಲ್ಪಕಾಲದಲ್ಲೇ ದಂಗೆಯು ವ್ಯಾಪಕವಾಗಿ ಹಬ್ಬಿತು. ಕ್ರಾಂತಿಯ ಪ್ರಮುಖ ಕೇಂದ್ರಗಳೆಂದರೆ ದಿಲ್ಲಿ, ಕಾನ್ಪುರ, ಲಕ್ನೋ, ಬರೇಲಿ, ಝಾನ್ಸಿ ಮತ್ತು ಬಿಹಾರದ ಆರಾ.






ಚಟುವಟಿಕೆ: ಝಾನ್ಸಿ ರಾಣಿ ಲಕ್ಷ್ಮೀಬಾಯಿ ಬ್ರಿಟಿಷರ ವಿರುದ್ಧ ಹೋರಾಡಿದ ಸಂಗತಿಯನ್ನು ಸಂಗ್ರಹಿಸಿರಿ.





**ಫಲಿತಾಂಶಗಳು**

ಈ ಹೋರಾಟವು ವಿಫಲಗೊಂಡರೂ ಅದು ದೀರ್ಘಕಾಲೀನ ಪರಿಣಾಮಗಳನ್ನು ಉಂಟುಮಾಡಿತು. ಈ ಹೋರಾಟದ ಪರಿಣಾಮವಾಗಿ ಈಸ್ಟ್ ಇಂಡಿಯಾ ಕಂಪನಿಯ ಆಳ್ವಿಕೆ ಅಂತ್ಯಗೊಂಡು ಅದರ ಕೈಯಲ್ಲಿದ್ದ ಭಾರತದ ಆಳ್ವಿಕೆಯನ್ನು ಬ್ರಿಟಿಷ್ ರಾಣಿ ವಹಿಸಿಕೊಂಡಳು. ಸಾ. ಶ. 1858 ರಲ್ಲಿ ಬ್ರಿಟನ್ನಿನ ರಾಣಿ ವಿಕ್ಟೋರಿಯಾ ಒಂದು 'ಘೋಷಣೆ' ಯನ್ನು ಹೊರಡಿಸಿದಳು. ಈ ಘೋಷಣೆಯು ಭಾರತೀಯರ ಧಾರ್ಮಿಕ ಸ್ವಾತಂತ್ರ್ಯದಲ್ಲಿ ಹಸ್ತಕ್ಷೇಪಮಾಡುವುದಿಲ್ಲವೆಂದು ಸ್ಪಷ್ಟಪಡಿಸಿತು.

ಸಾ. ಶ. 1857-58 ರ ಹೋರಾಟವು ಮುಂದೆ ಆಧುನಿಕ ರಾಷ್ಟ್ರೀಯ ಚಳವಳಿಯ ಉದಯಕ್ಕೆ ನಾಂದಿ ಹಾಡಿತು. ಇದು ಮುಂದಿನ ಸ್ವಾತಂತ್ರ್ಯಹೋರಾಟಕ್ಕೆ ನಿರಂತರ ಸ್ಫೂರ್ತಿಯಾಗಿ ಪರಿಣಮಿಸಿತು.

## 1857 ರ ಮಹಾದಂಗೆಯ ಸ್ವರೂಪ

ಬ್ರಿಟಿಷ್ ಇತಿಹಾಸಕಾರರು ಸಾ. ಶ. 1857 ರ ಭಾರತೀಯರ ಹೋರಾಟವನ್ನು ಕೇವಲ 'ಸಿಪಾಯಿಗಳ ದಂಗೆ' ಎಂದು ಪರಿಗಣಿಸಿದರು. ಆದರೆ ಭಾರತದ ರಾಷ್ಟ್ರೀಯ

ಇತಿಹಾಸಕಾರರು ಅದನ್ನು ಜನತೆಯ ಮಹಾನ್ ಬಂಡಾಯವೆಂದು ಸಾರಿದರಲ್ಲದೆ, 'ಭಾರತದ ಪ್ರಥಮ ಸ್ವಾತಂತ್ರ್ಯಸಂಗ್ರಾಮ' ಎಂದು ಕರೆದರು.

ಈ ಹೋರಾಟವನ್ನು ದೇಶದ ಸ್ವಾತಂತ್ರ್ಯಕ್ಕಾಗಿ ನಡೆದ ಪ್ರಥಮ ಯುದ್ಧವೆಂದು ಕರೆದವರಲ್ಲಿ ವಿನಾಯಕ ದಾಮೋದರ ಸಾವರ್ಕರ್ ಮೊದಲಿಗರು. ಪಟ್ಟಾಭಿ ಸೀತಾರಾಮಯ್ಯ ಅವರು ಕೂಡ ಇದನ್ನು ಭಾರತದ ಮೊದಲ ಸ್ವಾತಂತ್ರ್ಯ ಸಮರವೆಂದು ಸಾರಿದರು. ಅದು ದೇಶದ ಬಹುತೇಕ ಜನಸಮುದಾಯಗಳು ಒಂದಾಗಿ ನಡೆಸಿದ ಹೋರಾಟವಾಗಿತ್ತು.

ಸಾ. ಶ. 1857 ರ ಹೋರಾಟವು ಭಾರತದ ಇತಿಹಾಸದಲ್ಲಿ ಹೊಸ ರಾಜಕೀಯ ಪ್ರಜ್ಞೆಯನ್ನು ಸೃಷ್ಟಿಸಿತು. ಇದರ ಫಲವಾಗಿ ಸಾಮ್ರಾಜ್ಯಶಾಹಿ ವಿರೋಧಿ ಹೋರಾಟಗಳು ವಿವಿಧ ರೂಪಗಳಲ್ಲಿ ಹುಟ್ಟಿ ಬೆಳೆದವು. ಈ ಹೋರಾಟಗಳಲ್ಲಿ ಭಾಗವಹಿಸಿ ಹುತಾತ್ಮರಾದವರು ಬಹುಬೇಗ ದೇಶದಲ್ಲಿ ಮನೆಮಾತಾದರು. ಅವರ ತ್ಯಾಗ ಬಲಿದಾನಗಳನ್ನು ನಾವು ನಿರಂತರವಾಗಿ ಸ್ಮರಿಸಿಕೊಳ್ಳಬೇಕಾಗಿದೆ.

## ಅಭ್ಯಾಸಗಳು

### I. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

1. ಪ್ರಥಮ ಸ್ವಾತಂತ್ರ್ಯಸಂಗ್ರಾಮಕ್ಕೆ ತಕ್ಷಣದ ಕಾರಣ ಯಾವುದಾಗಿತ್ತು?
2. ಮಂಗಲ ಪಾಂಡೆ ಯಾರು?
3. ಪ್ರಥಮ ಸ್ವಾತಂತ್ರ್ಯಸಂಗ್ರಾಮದ ಯಾವುದಾದರೂ ಒಂದು ಪರಿಣಾಮವನ್ನು ತಿಳಿಸಿರಿ.
4. 1857ರ ಹೋರಾಟವನ್ನು ಭಾರತದ ಪ್ರಥಮ ಸ್ವಾತಂತ್ರ್ಯಸಂಗ್ರಾಮವೆಂದು ಮೊದಲು ಕರೆದವರು ಯಾರು?
5. ಪ್ರಥಮ ಸ್ವಾತಂತ್ರ್ಯಸಂಗ್ರಾಮದಲ್ಲಿ ಭಾಗವಹಿಸಿದ ಮೊಗಲ್ ದೊರೆ ಯಾರು?
6. ಪ್ರಥಮ ಸ್ವಾತಂತ್ರ್ಯಸಂಗ್ರಾಮದಲ್ಲಿ ಹೋರಾಡಿದ ಮಹಿಳಾ ನಾಯಕಿಯನ್ನು ಹೆಸರಿಸಿ.

### II. ಈ ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿರಿ

1. ಭಾರತದ ಪ್ರಥಮ ಸ್ವಾತಂತ್ರ್ಯಸಂಗ್ರಾಮದ ಕಾರಣಗಳನ್ನು ಪಟ್ಟಿಮಾಡಿ.
2. ಭಾರತದ ಪ್ರಥಮ ಸ್ವಾತಂತ್ರ್ಯಸಂಗ್ರಾಮದಲ್ಲಿ ಭಾಗವಹಿಸಿದ ಕರ್ನಾಟಕದ ನಾಯಕರನ್ನು ಹೆಸರಿಸಿ.

### ಚಟುವಟಿಕೆ

ಮಂಗಲ್ ಪಾಂಡೆ, ಝಾನ್ಸಿ ಲಕ್ಷ್ಮೀಬಾಯಿ, ತಾಂತ್ಯಾ ಟೋಪೆ, ನಾನಾ ಸಾಹೇಬ್, ಬೇಗಮ್ ಹಜ್ರತ್ ಮಹಲ್, ಕುಂವರ್ ಸಿಂಗ್, ಮುಂಡರಗಿ ಭೀಮರಾವ್ ಮುಂತಾದ ಕ್ರಾಂತಿಕಾರರ ಜೀವನ ಕಥನವನ್ನು ಓದಿರಿ.

## ಸ್ವಾತಂತ್ರ್ಯ ಚಳವಳಿ (1885-1919)

ಬ್ರಿಟಿಷರ ಶೋಷಣಾತ್ಮಕ ನೀತಿಗಳಿಂದಾಗಿ 19ನೇ ಶತಮಾನದ ಉತ್ತರಾರ್ಧದಲ್ಲಿ ರಾಷ್ಟ್ರೀಯತೆ ಚಿಗುರೊಡೆಯಿತು. ಇಂಗ್ಲಿಷ್ ಶಿಕ್ಷಣ ಪಡೆದ ಹೊಸ ವಿದ್ಯಾವಂತ ವರ್ಗವು ಬ್ರಿಟಿಷ್ ಆಳಿಕೆಯ ನಿಜವಾದ ಉದ್ದೇಶವನ್ನು ಅರ್ಥಮಾಡಿಕೊಂಡಿತು. ರೈತಾಪಿಗಳು, ಆದಿವಾಸಿಗಳು ಮತ್ತಿತರ ವರ್ಗಗಳು ಸಹ ಬ್ರಿಟಿಷರಿಂದ ತೀವ್ರ ಸಂಕಷ್ಟಕ್ಕೊಳಗಾಗಿದ್ದು, ಬ್ರಿಟಿಷರ ವಿರುದ್ಧ ತೀವ್ರ ಪ್ರತಿಭಟನೆಗಾಗಿ ಮಿಡಿಯುತ್ತಿದ್ದವು.

## ರಾಷ್ಟ್ರೀಯತೆಯ ಬೆಳವಣಿಗೆ

ಭಾರತವು ವೈವಿಧ್ಯಮಯ ಸಂಸ್ಕೃತಿಗಳನ್ನು ಹೊಂದಿರುವ ದೇಶ. ನಮಗೆ ಸುದೀರ್ಘ ಸಾಂಸ್ಕೃತಿಕ ಮತ್ತು ಚಾರಿತ್ರಿಕ ಪರಂಪರೆ ಇದೆ. ಇವು 19ನೇ ಶತಮಾನದ ಉತ್ತರಾರ್ಧದಲ್ಲಿ ರಾಷ್ಟ್ರೀಯತೆಯ ಬೆಳವಣಿಗೆಗೆ ಒಂದು ತಾತ್ವಿಕ ಬುನಾದಿಯನ್ನು ಹಾಕಿಕೊಟ್ಟವು. "ರಾಷ್ಟ್ರೀಯತೆ ಎಂದರೆ ಒಂದು ನಿರ್ದಿಷ್ಟ ಭೌಗೋಳಿಕ ಪ್ರದೇಶದ ಜನರ ಮನದಲ್ಲಿ ಮೂಡುವ 'ನಾವೆಲ್ಲರೂ ಒಂದೇ' ಎಂಬ ಏಕತೆಯ ಭಾವನೆಯಾಗಿದೆ."

ಸಾ. ಶ. 1857 ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾರತೀಯರಲ್ಲಿ ಸರಿಯಾದ ಹೊಂದಾಣಿಕೆ ಇಲ್ಲದೆ ಹೋರಾಟ ವಿಫಲಗೊಂಡಿತು. ಇದು ಪ್ರಜ್ಞಾವಂತ ಭಾರತೀಯರಲ್ಲಿ ಸಂಘಟನೆಯ ಅರಿವನ್ನು ಉಂಟುಮಾಡಿತು. ಕ್ರಮೇಣ ರಾಷ್ಟ್ರೀಯ ಹೋರಾಟವಾಗಿ ರೂಪುಗೊಂಡಿತು. ರಾಷ್ಟ್ರೀಯತೆಯ ಬೆಳವಣಿಗೆಗೆ ಹಲವು ಅಂಶಗಳು ಪ್ರೇರಣೆ ನೀಡಿದ್ದವು. ಅವು ಈ ರೀತಿ ಇವೆ.

1. ಪಾಶ್ಚಿಮಾತ್ಯ ಶಿಕ್ಷಣ ಮತ್ತು ಆಧುನಿಕ ಜ್ಞಾನವಿಜ್ಞಾನದ ಪರಿಚಯ: ಇಂಗ್ಲೀಷ್ ಶಿಕ್ಷಣ ಪಡೆದ ಭಾರತೀಯರು ಯೂರೋಪಿನ ಚಿಂತನಶೀಲ ಕೃತಿಗಳನ್ನು ಓದುವುದರ ಮೂಲಕ ರಾಷ್ಟ್ರೀಯ ರಾಜಕೀಯ ಮನೋಭಾವವನ್ನು ಅರಗಿಸಿಕೊಂಡರು. ಯೂರೋಪಿನಲ್ಲಿ ಹುಟ್ಟಿಕೊಂಡ ಪರಿಕಲ್ಪನೆಗಳಾದ ಸ್ವಾತಂತ್ರ, ಸಮಾನತೆ ಮತ್ತು ಭ್ರಾತೃತ್ವಗಳು ಇವರನ್ನು ರಾಜಕೀಯವಾಗಿ ಪ್ರೇರೇಪಿಸಿದವು. ಸ್ವಾತಂತ್ರ್ಯದ ಅಭಿಲಾಷೆಗೆ ಸ್ಫೂರ್ತಿ ನೀಡಿತು. "ಇಂಗ್ಲಿಷ್ ಕಲಿತ ಭಾರತೀಯರು ತಮ್ಮ ಬೆಂಬಲಕ್ಕಿರುತ್ತಾರೆ" ಎನ್ನುವ ಬ್ರಿಟಿಷರ ಲೆಕ್ಕಾಚಾರವನ್ನು ಹುಸಿಗೊಳಿಸಿದರು.

2. ಏಕರೂಪ ಆಡಳಿತಾತ್ಮಕ ವ್ಯವಸ್ಥೆ: ಬ್ರಿಟಿಷರು ಭಾರತವನ್ನು ಏಕರೂಪ ಆಡಳಿತ ವ್ಯವಸ್ಥೆಗೆ ಒಳಪಡಿಸಿದರು. ಇದರಿಂದ ಒಂದೇ ರೀತಿಯ ನಿಯಮಗಳಿಗೆ ಒಳಪಟ್ಟ ಭಾರತೀಯರು ನಾವೆಲ್ಲರೂ ಸಮಾನರು ಎಂಬ ಭಾವನೆಯನ್ನು ಬೆಳೆಸಿಕೊಳ್ಳುವಂತಾಯಿತು. ಅದೇ ರೀತಿ ಬ್ರಿಟಿಷರು ಜಾರಿಗೆ ತಂದ ಜನ ವಿರೋಧಿ ಕಾಯ್ದೆ ಕಾನೂನುಗಳನ್ನು ಎಲ್ಲರೂ ಒಕ್ಕೊರಲಿನಿಂದ ವಿರೋಧಿಸಲಾರಂಭಿಸಿದರು. ಇದು ಭಾರತೀಯರಲ್ಲಿ ರಾಷ್ಟ್ರೀಯ ಪ್ರಜ್ಞೆ ಬೆಳೆಯಲು ಕಾರಣವಾಯಿತು.

3. ಆರ್ಥಿಕ ಶೋಷಣೆ: ಬ್ರಿಟಿಷರು ತಮ್ಮ ಆರ್ಥಿಕ ನೀತಿಗಳ ಮೂಲಕ ಭಾರತೀಯರ ವ್ಯಾಪಾರ, ಕೃಷಿ, ಕೈಗಾರಿಕೆಗಳ ಅವನತಿಗೆ ಕಾರಣರಾದರು. ಭೂಮಿಯನ್ನು ಮಾರಾಟದ ವಸ್ತುವನ್ನಾಗಿ ಪರಿವರ್ತಿಸಿದರು. ದಾದಾಬಾಯಿ ನವರೋಜಿಯವರು ಭಾರತದ ಸಂಪತ್ತನ್ನು

ಬ್ರಿಟಿಷರು ದೋಚುತ್ತಿದ್ದ ಕ್ರಮವನ್ನು ತಮ್ಮ 'ಸಂಪತ್ತಿನ ಸೋರಿಕೆ ಸಿದ್ಧಾಂತ'ದ ಮೂಲಕ ಪ್ರತಿಪಾದಿಸಿದರು.

4. ಪರಂಪರೆಯ ಪರಿಚಯ: ಸರ್ ವಿಲಿಯಂ ಜೋನ್ಸ್, ಕೋಲ್‌ಬ್ರೂಕ್, ಮ್ಯಾಕ್ಸ್ ಮುಲ್ಲರ್, ಕನ್ನಿಂಗ್‌ಹ್ಯಾಮ್ ಮುಂತಾದ ವಿದೇಶಿ ವಿದ್ವಾಂಸರು ಭಾರತದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ತಮ್ಮ ಅಧ್ಯಯನದ ಮೂಲಕ ಭಾರತೀಯರಿಗೆ ಪರಿಚಯಿಸಿದರು. ಇದರಿಂದ ಭಾರತೀಯ ಪರಂಪರೆ ಗ್ರೀಕ್, ರೋಮ್‌ಗಳಿಗೇನೂ ಕಡಿಮೆ ಇಲ್ಲ ಎಂಬುದು ದೃಢಪಟ್ಟಿತು. ಆ ಮೂಲಕ ರಾಷ್ಟ್ರೀಯತೆಯ ಬೇರುಗಳು ಅರಿವಿನ ರೂಪದಲ್ಲಿ ಮತ್ತೆ ಆಳಕ್ಕೆ ಇಳಿಯತೊಡಗಿದವು.

5. ಸಾಮಾಜಿಕ ಧಾರ್ಮಿಕ ಚಳವಳಿಗಳು: 19 ನೇ ಶತಮಾನದ ಭಾರತೀಯ ಸಮಾಜ ಸುಧಾರಕರಾದ ರಾಮಮೋಹನ ರಾಯ್, ಈಶ್ವರಚಂದ್ರ ವಿದ್ಯಾಸಾಗರ, ಸ್ವಾಮಿ ದಯಾನಂದ ಸರಸ್ವತಿ, ಸ್ವಾಮಿ ವಿವೇಕಾನಂದ ಮೊದಲಾದವರು ವಂಚಿತ ಮತ್ತು ಶೋಷಿತ ಸಮುದಾಯಗಳಿಗೆ ಶಿಕ್ಷಣದ ಪ್ರಾಮುಖ್ಯತೆಯನ್ನು ತಿಳಿಸಿಕೊಟ್ಟರು. ದಯಾನಂದರು ಸ್ವರಾಜ್ಯ ಮತ್ತು ಸ್ವದೇಶಿ ವಿಚಾರಧಾರೆಯನ್ನು ಬಿತ್ತಿದರೆ, ವಿವೇಕಾನಂದರು ಜಡಗೊಂಡಿದ್ದ ಸಮುದಾಯವನ್ನು ಎಚ್ಚರಗೊಳಿಸುವ ಕೆಲಸ ಮಾಡಿದರು. ಇದು ರಾಷ್ಟ್ರೀಯತೆಯ ಬೆಳವಣಿಗೆಗೆ ಹೊಸ ಆಯಾಮ ತಂದುಕೊಟ್ಟಿತು. ವಿದ್ಯಾವಂತ ಭಾರತೀಯರನ್ನು ಕ್ರಿಯಾಶೀಲರನ್ನಾಗಿಸಿತು.

6. ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಸ್ಫೂರ್ತಿ: ಈ ಘಟನೆಯು ಭಾರತೀಯರು ರಾಜಕೀಯವಾಗಿ ಹೆಚ್ಚು ಸಂಘಟಿತರಾಗಬೇಕೆಂಬುದನ್ನು ಮನವರಿಕೆ ಮಾಡಿಕೊಟ್ಟಿತು. ಅಲ್ಲದೆ ಈ ಹೋರಾಟದಲ್ಲಿ ಹುತಾತ್ಮರಾದ ಮಂಗಲ್‌ಪಾಂಡೆ, ಲಕ್ಷ್ಮೀಬಾಯಿ, ಹಜ್ರತ್ ಮಹಲ್ ಮೊದಲಾದ ನಾಯಕರು ಮುಂದಿನ ತಲೆಮಾರಿನ ನಾಯಕರಿಗೆ ಸ್ಫೂರ್ತಿಯ ಸೆಲೆಯಾದರು.

7. ಜನಾಂಗೀಯ ತಾರತಮ್ಯ: ಬ್ರಿಟಿಷರು ತಾವು ಶ್ರೇಷ್ಠರೆಂದು ಭಾವಿಸಿ, ಭಾರತೀಯರನ್ನು ಅನಾಗರಿಕರೆಂದು ಕರೆದರು. ಆಡಳಿತದ ಉನ್ನತ ಹುದ್ದೆಗಳು ಬ್ರಿಟಿಷರಿಗಷ್ಟೇ ಮೀಸಲಾಗಿದ್ದವು. ಇದರಿಂದ ಒಂದೇ ನೀತಿ, ನಿಯಮಗಳಿಗೆ ಒಳಪಟ್ಟ ಭಾರತೀಯರಲ್ಲಿ ಸಹಜವಾಗಿ ನಾವೆಲ್ಲರೂ ಸಮಾನರು ಎಂಬ ಭಾವನೆಯನ್ನು ಉಂಟುಮಾಡಿತು. ಬ್ರಿಟಿಷರು ತಂದ ಜನವಿರೋಧಿ ಕಾಯ್ದೆ ಕಾನೂನುಗಳನ್ನು ಎಲ್ಲರೂ ಒಕ್ಕೊರಲಿನಿಂದ ವಿರೋಧಿಸಲಾರಂಭಿಸಿದರು. ಹೀಗಾಗಿ ಭಾರತೀಯರಲ್ಲಿ ನಾವೆಲ್ಲ ಒಂದೇ ಎಂಬ ರಾಷ್ಟ್ರೀಯ ಪ್ರಜ್ಞೆ ಬೆಳೆಯಲು ಕಾರಣವಾದವು.

ಭಾರತ ರಾಷ್ಟ್ರೀಯ ಕಾಂಗ್ರೆಸ್ (1885)

ಭಾರತ ರಾಷ್ಟ್ರೀಯ ಕಾಂಗ್ರೆಸ್ ನಿವೃತ್ತ ಬ್ರಿಟಿಷ್ ನಾಗರಿಕ ಸೇವಾಧಿಕಾರಿ ಎಲನ್ ಆಕ್ಟೇವಿಯನ್ ಹ್ಯೂಮ್ (ಎ. ಓ. ಹ್ಯೂಮ್) ಅವರ ಕನಸಿನ ಕೂಸಾಗಿತ್ತು. ಇದು ಸಾ. ಶ. 1885 ರಲ್ಲಿ ಮುಂಬೈಯಲ್ಲಿ ಸ್ಥಾಪಿತವಾಯಿತು. ಉಮೇಶಚಂದ್ರ ಬ್ಯಾನರ್ಜಿಯವರು ಕಾಂಗ್ರೆಸಿನ ಮೊದಲ ಅಧ್ಯಕ್ಷರಾಗಿದ್ದರು. ಮುಂಬೈಯಲ್ಲಿ ನಡೆದ ಕಾಂಗ್ರೆಸಿನ ಮೊದಲ ಅಧಿವೇಶನದಲ್ಲಿ 72 ಮಂದಿ ಪ್ರತಿನಿಧಿಗಳು ಭಾಗವಹಿಸಿದ್ದರು. ಅವರಲ್ಲಿ ಹೆಚ್ಚಿನವರು

ವಕೀಲರು, ಪತ್ರಕರ್ತರು ಮತ್ತು ಸಮಾಜದ ಪ್ರತಿಷ್ಠಿತ ವರ್ಗದವರಾಗಿದ್ದರು. ವಾಸ್ತವಾಗಿ ಇದು ಕಾಂಗ್ರೆಸ್ ರಾಷ್ಟ್ರೀಯ ಚಳವಳಿಗೆ ಚಾಲನೆ ನೀಡಿದ ಮೊದಲ ರಾಜಕೀಯ ವೇದಿಕೆಯಾಗಿತ್ತು.



**ಭಾರತೀಯ ರಾಷ್ಟ್ರೀಯ ಕಾಂಗ್ರೆಸಿನ ಉದ್ದೇಶಗಳು:**

1. ದೇಶದ ವಿವಿಧ ಭಾಗಗಳಲ್ಲಿರುವ ರಾಜಕೀಯ ಕಾರ್ಯಕರ್ತರ ನಡುವೆ ಸ್ನೇಹ ಸಂಬಂಧವನ್ನು ಬೆಸೆಯುವುದು.
2. ರಾಷ್ಟ್ರೀಯ ಏಕತೆಯನ್ನುಂಟುಮಾಡುವುದು.
3. ಜನತೆಯ ಬೇಡಿಕೆಗಳನ್ನು ಸರ್ಕಾರದ ಮುಂದೆ ಮಂಡಿಸಿ, ಜನಾಭಿಪ್ರಾಯವನ್ನು ರೂಪಿಸುವುದು.
4. ಪ್ರಾಂತೀಯತೆಯನ್ನು ತೊರೆದು ರಾಷ್ಟ್ರೀಯತೆಯನ್ನು ಮೂಡಿಸುವುದು.

## ಮಂದಗಾಮಿಗಳ ಯುಗ (1885-1905)

ಭಾರತ ರಾಷ್ಟ್ರೀಯ ಕಾಂಗ್ರೆಸಿನ ಆರಂಭಿಕ ನಾಯಕರುಗಳನ್ನು ಮಂದಗಾಮಿಗಳು (ಸೌಮ್ಯವಾದಿಗಳು) ಎಂದು ಕರೆಯಲಾಗಿದೆ. ಸಾ. ಶ. 1885ರಿಂದ 1905ರ ನಡುವಿನ ಕಾಲಘಟ್ಟವನ್ನು 'ಮಂದಗಾಮಿಗಳ ಕಾಲ' ಎಂದು ಪರಿಗಣಿಸಲಾಗಿದೆ. ಅವರು ಸಂವಿಧಾನಾತ್ಮಕ ನೀತಿಯಲ್ಲಿ ನಂಬಿಕೆಯಿರಿಸಿದ್ದರು. ಬ್ರಿಟಿಷ್ ಆಳ್ವಿಕೆಗೆ ನಿಷ್ಠಾವಂತರಾದ ಅವರು ಪ್ರಾರ್ಥನೆ, ಭಿನ್ನಹ ಮತ್ತು ಪ್ರತಿಭಟನೆಯ ನೀತಿಯನ್ನು ಅನುಸರಿಸಿದರು. ಜೊತೆಗೆ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಸುಧಾರಣೆಗಳನ್ನು ಜಾರಿಗೆ ತರುವಂತೆ ಬ್ರಿಟಿಷರನ್ನು ಮನವೊಲಿಸಲು ಪ್ರಯತ್ನಿಸಿದರು. ಪ್ರಮುಖ ಮಂದಗಾಮಿ ನಾಯಕರೆಂದರೆ ದಾದಾಬಾಯಿ ನವರೋಜಿ, ಸುರೇಂದ್ರನಾಥ ಬ್ಯಾನರ್ಜಿ, ಗೋಪಾಲಕೃಷ್ಣ ಗೋಖಲೆ, ಮಹಾದೇವ ಗೋವಿಂದ ರಾನಡೆ ಮತ್ತು ಇನ್ನಿತರರು.

ಮಂದಗಾಮಿಗಳ ಹೋರಾಟದ ಫಲವಾಗಿ ಭಾರತೀಯರು ಶಾಸನ ಸಭೆಗಳನ್ನು ಪ್ರವೇಶಿಸಲು ಸಾಧ್ಯವಾಯಿತು. ಅಲ್ಲದೆ ಮಂದಗಾಮಿಗಳ ಪ್ರಯತ್ನದಿಂದ ಭಾರತದ ಬಡತನಕ್ಕೆ ಬ್ರಿಟಿಷರು ಕಾರಣ ಎಂಬುದು ತಿಳಿಯಿತು. ಜೊತೆಗೆ ಈ ಕಾಲಘಟ್ಟದಲ್ಲಿ ಭಾರತೀಯರು ರಾಜಕೀಯ ಸಂಘರ್ಷಕ್ಕೆ ಬೇಕಾದ ತರಬೇತಿ ಪಡೆಯುವ ಮೂಲಕ ಬ್ರಿಟಿಷ್ ವಿರೋಧಿ ಹೋರಾಟಕ್ಕೆ ರಾಷ್ಟ್ರೀಯ ವ್ಯಾಪ್ತಿಯನ್ನು ಸೃಷ್ಟಿಸಿಕೊಂಡರು.



ಮಂದಗಾಮಿಗಳ ಬೇಡಿಕೆಗಳು: ವಾಕ್ ಮತ್ತು ಮುದ್ರಣ ಸ್ವಾತಂತ್ರ್ಯ, ಕಾರ್ಯಾಂಗದಿಂದ ನ್ಯಾಯಾಂಗದ ಬೇರ್ಪಡೆ, ಸೈನಿಕ ವೆಚ್ಚದ ಕಡಿತ, ಪ್ರಾಥಮಿಕ, ಪ್ರೌಢ ಮತ್ತು ತಾಂತ್ರಿಕ ಶಿಕ್ಷಣದ ಅನುಷ್ಠಾನ, ಶಸ್ತ್ರಾಸ್ತ್ರ ನಿಷೇಧ ಕಾಯಿದೆಯ ರದ್ದತಿ, ಬ್ಯಾಂಕಿಂಗ್, ನೀರಾವರಿ, ವೈದ್ಯಕೀಯ ಮತ್ತು ಆರೋಗ್ಯ ಸೌಲಭ್ಯಗಳು, ಉಪ್ಪಿನ ಸುಂಕದ ಸಂಪೂರ್ಣ ರದ್ದತಿ, ಇಂಗ್ಲೆಂಡ್ ಮತ್ತು ಇಂಡಿಯಾದಲ್ಲಿ ಏಕಕಾಲದಲ್ಲಿ ಐ. ಸಿ. ಎಸ್. ಪರೀಕ್ಷೆಯನ್ನು ನಡೆಸುವುದು, ಕೇಂದ್ರ ಹಾಗೂ ಪ್ರಾಂತೀಯ ಶಾಸನ ಸಭೆಗಳಲ್ಲಿ ಭಾರತೀಯರಿಗೆ ಪ್ರಾತಿನಿಧ ನೀಡುವುದು, ಉನ್ನತ ಹುದ್ದೆಗಳಿಗೆ ಭಾರತೀಯರನ್ನು ನೇಮಿಸುವುದು ಮುಂತಾದವು.

### ತೀವ್ರಗಾಮಿಗಳ ಯುಗ (1905-1919)

ಮಂದಗಾಮಿಗಳು ಜನತೆಯನ್ನು ಹೆಚ್ಚಾಗಿ ತಲುಪಲಿಲ್ಲ. ಅವರು ಅನುಸರಿಸಿದ ಪ್ರಾರ್ಥನೆ ಮತ್ತು ಮನವಿ ನೀತಿಗಳನ್ನು 'ತಿರುಪೆಯ ನೀತಿ' (ಪಾಲಿಸಿ ಆಫ್ ಮೆಂಡಿಕೆನ್ಸಿ) ಎಂದು ತೀವ್ರವಾದಿಗಳು ವ್ಯಂಗ್ಯವಾಡಿದರು. ಯುವವರ್ಗವು ಅವರ ನೀತಿಗಳಿಗೆ ಆಕರ್ಷಿತರಾಗಲಿಲ್ಲ. ಇವರ ಕಾಯ್ದುನೋಡುವ ವಿಧಾನವನ್ನು ಪ್ರಶ್ನಿಸುವ ಹೊಸ ನಾಯಕರ ಒಂದು ಗುಂಪು ಕಾಂಗ್ರೆಸಿನಲ್ಲಿ ಉದಯಿಸಿತು. ಅವರೇ ತೀವ್ರಗಾಮಿಗಳು. ಲಾಲಾ ಲಜಪತ್‌ರಾಯ್, ಬಾಲಗಂಗಾಧರ ತಿಲಕ್ ಮತ್ತು ಬಿಪಿನ್‌ಚಂದ್ರ ಪಾಲ್ ಇವರು ತೀವ್ರಗಾಮಿ ಗುಂಪಿನ ನಾಯಕರಾಗಿದ್ದು 'ಲಾಲ್ ಬಾಲ್ ಪಾಲ್' ಎಂದೇ ಜನಪ್ರಿಯರಾದರು. ಸಾ. ಶ. 1905-1919ರ ಕಾಲಾವಧಿಯನ್ನು ತೀವ್ರಗಾಮಿ ರಾಜಕೀಯದ ಕಾಲವೆಂದು ಗುರುತಿಸಲಾಗಿದೆ.



ಬಾಲಗಂಗಾಧರ ತಿಲಕರು ಒಬ್ಬ ಅಪ್ರತಿಮ ದೇಶಭಕ್ತ. "ಸ್ವರಾಜ್ಯವು ನನ್ನ ಜನ್ಮ ಸಿದ್ಧ ಹಕ್ಕು; ನಾನು ಅದನ್ನು ಪಡೆದೇ ತೀರುತ್ತೇನೆ", ಎಂಬ ಅವರ ಘೋಷಣೆಯಲ್ಲಿ ಸ್ವಾತಂತ್ರ್ಯದ ಉತ್ಕಟತೆಯಿತ್ತು. ಜನರನ್ನು ಒಗ್ಗೂಡಿಸುವ ದೃಷ್ಟಿಯಿಂದ ತಿಲಕರು ಗಣೇಶ ಮತ್ತು ಶಿವಾಜಿ ಉತ್ಸವಗಳನ್ನು ಪರಿಚಯಿಸಿದರು. 'ಮರಾಠ' (ಇಂಗ್ಲಿಷ್) ಮತ್ತು 'ಕೇಸರಿ' (ಮರಾಠಿ) ಪತ್ರಿಕೆಗಳನ್ನು ಪ್ರಕಟಿಸುವ ಮೂಲಕ ಜನರನ್ನು ರಾಜಕೀಯವಾಗಿ ಪ್ರೇರೇಪಿಸಿದರು. ಬಿಪಿನ್‌ಚಂದ್ರ ಪಾಲರು 'ನ್ಯೂ ಇಂಡಿಯಾ' ಹಾಗೂ ಅರವಿಂದರು 'ವಂದೇ ಮಾತರಂ' ಪತ್ರಿಕೆಗಳನ್ನು ಪ್ರಾರಂಭಿಸಿದರು. ಲಾಲಾ ಲಜಪತ್‌ರಾಯ್ 'ಪಂಜಾಬಿನ ಸಿಂಹ' ಎಂದೇ ಜನಪ್ರಿಯರಾಗಿದ್ದರು. ಅವರು, "ನಾವು ಸ್ವರಾಜ್ಯವನ್ನು ಹಕ್ಕಿನ ರೂಪದಲ್ಲಿ ಪಡೆಯುತ್ತೇವೆಯೇ ಹೊರತು ಭಿಕ್ಷಾರೂಪದಲ್ಲಿ ಅಲ್ಲ" ಎಂದು ಹೇಳಿದರು. ಬಿಪಿನ್‌ಚಂದ್ರ ಪಾಲರು ಬಂಗಾಲದಲ್ಲಿ 'ಸಾಮೂಹಿಕ ಪ್ರತಿಭಟನೆ' ಯನ್ನು ಸಂಘಟಿಸಿದರು. ತೀವ್ರವಾದವನ್ನು ಪ್ರತಿನಿಧಿಸಿದ ಮತ್ತೊಬ್ಬ ನಾಯಕ ಅರವಿಂದ ಘೋಷ್. ವಿದೇಶಿ ವಸ್ತುಗಳ ಬಹಿಷ್ಕಾರ, ಸ್ವದೇಶಿ ವಸ್ತುಗಳನ್ನು ಮಾತ್ರವೇ ಬಳಸುವುದು ಮತ್ತು ರಾಷ್ಟ್ರೀಯ ಶಾಲೆಗಳನ್ನು ತೆರೆಯುವುದು ಇವರ ಕಾರ್ಯವಿಧಾನವಾಗಿತ್ತು.

**ತೀವ್ರಗಾಮಿಗಳ ಬೆಳವಣಿಗೆಗೆ ಕಾರಣಗಳು**

1. ಭಾರತೀಯರನ್ನು ಉನ್ನತ ಹುದ್ದೆಗಳಿಗೆ ಪರಿಗಣಿಸದಿದ್ದುದು.
2. 1905 ರಲ್ಲಿ ಲಾರ್ಡ್ ಕರ್ಜನ್‌ನು ಬಂಗಾಳವನ್ನು ವಿಭಜಿಸುವ ಮೂಲಕ ಮತೀಯ ರಾಜಕಾರಣಕ್ಕೆ ಪ್ರಯತ್ನಿಸಿದ್ದು.
3. 1905 ರಲ್ಲಿ ರಷ್ಯ ದೇಶವನ್ನು ಸಣ್ಣ ರಾಷ್ಟ್ರವಾದ ಜಪಾನ್ ಸೋಲಿಸಿದ ಘಟನೆಯು ಯೂರೋಪಿಯನ್‌ರನ್ನು ಏಷ್ಯನ್‌ರು ಸೋಲಿಸಬಹುದು ಎಂಬ ಆತ್ಮವಿಶ್ವಾಸ ಮೂಡಿಸಿತು.
4. ಐರ್ಲೆಂಡ್, ರಷ್ಯ, ಚೀನ, ಟರ್ಕಿ, ಈಜಿಪ್ಟ್ ಮುಂತಾದ ರಾಷ್ಟ್ರಗಳಲ್ಲಿ ನಡೆಯುತ್ತಿದ್ದ ಕ್ರಾಂತಿಕಾರಿ ಆಂದೋಲನಗಳು ಭಾರತೀಯರನ್ನು ಪ್ರೇರೇಪಿಸಿದವು.

### ಬಂಗಾಲದ ವಿಭಜನೆ (1905)

ತೀವ್ರವಾದಿಗಳ ರಾಷ್ಟ್ರೀಯ ಹೋರಾಟವನ್ನು ಪ್ರೇರೇಪಿಸಿದ ಪ್ರಮುಖ ಘಟನೆಯೆಂದರೆ ಸಾ. ಶ. 1905ರ ಬಂಗಾಲದ ವಿಭಜನೆ. ಬಂಗಾಲದಲ್ಲಿ ರಾಷ್ಟ್ರೀಯತೆಯ

ಅಲೆಯು ತೀವ್ರಗೊಳ್ಳುತ್ತಿರುವುದನ್ನು ಕಂಡು ಬ್ರಿಟಿಷರು ಆತಂಕಗೊಂಡರು. ಆದ್ದರಿಂದ ಬಂಗಾಲವನ್ನು ಹಿಂದೂ ಮತ್ತು ಮುಸಲ್ಮಾನ ಎಂಬ ಮತೀಯ ಭಿನ್ನತೆಯ ಆಧಾರದ ಮೇಲೆ ವಿಭಜಿಸುವ ಮೂಲಕ ರಾಷ್ಟ್ರೀಯತೆಯ ತೀವ್ರತೆಯನ್ನು ಹತ್ತಿಕ್ಕಲು ವೈಸರಾಯ್ ಲಾರ್ಡ್ ಕರ್ಜನ್ ಪ್ರಯತ್ನಿಸಿದನು. ಈ ವಿಭಜನೆಯನ್ನು ವಿರೋಧಿಸಿ 1905 ಅಕ್ಟೋಬರ್ 16 ರಂದು ಬಂಗಾಲದಾದ್ಯಂತ 'ರಾಷ್ಟ್ರೀಯ ಶೋಕದಿನ'ವನ್ನಾಗಿ ಆಚರಿಸಿದರು. ರವೀಂದ್ರನಾಥ ಟಾಗೋರ್ 'ಅಮರ್ ಸೋನಾರ್ ಬಾಂಗ್ಲ' ಗೀತೆಯನ್ನು ರಾಷ್ಟ್ರೀಯ ಗೀತೆಯಾಗಿ ಹಾಡಿದರು. ಬಂಕಿಮ ಚಂದ್ರರ 'ವಂದೇ ಮಾತರಂ' ದೇಶಪ್ರೇಮಿಗಳ ಗೀತೆಯಾಗಿತ್ತು. ಬಂಗಾಲದ ಏಕತೆಯನ್ನು ಪ್ರತಿನಿಧಿಸಲು ಹಿಂದೂ ಮುಸಲ್ಮಾನರು ಪರಸ್ಪರ 'ರಕ್ಷಾ ಬಂಧನ್' ಕಟ್ಟಿಕೊಂಡರು. ಜನತೆಯ ತೀವ್ರ ಪ್ರತಿಭಟನೆಗಳಿಗೆ ಮಣಿದು ಸಾ. ಶ. 1911 ರಲ್ಲಿ ವಿಭಜನೆಯನ್ನು ಬ್ರಿಟಿಷರು ರದ್ದು ಮಾಡಬೇಕಾಯಿತು.


ಲಾರ್ಡ್ ಕರ್ಜನ್


ಬಂಕಿಮಚಂದ್ರ ಚಟರ್ಜಿ

## ಮುಸ್ಲಿಮ್ ಲೀಗ್ ಸ್ಥಾಪನೆ (1906)

ಬ್ರಿಟಿಷರು ಒಡೆದು ಆಳುವ ನೀತಿಯನ್ನು ಅನುಸರಿಸುತ್ತ ರಾಷ್ಟ್ರೀಯ ಚಳವಳಿಯಿಂದ ಮುಸ್ಲಿಮರನ್ನು ದೂರವಿಡಲು ಪ್ರಯತ್ನಿಸುತ್ತಿದ್ದರು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪನೆಯಾದ ಕಾಲದಿಂದಲೇ ಮುಸ್ಲಿಮರು ತಮ್ಮ ಸಮುದಾಯ ಹಿತಾಸಕ್ತಿಯ ಹಿನ್ನೆಲೆಯಲ್ಲಿ ಪ್ರತ್ಯೇಕ ಸಂಘಟನೆಯನ್ನು ರಚಿಸಿಕೊಳ್ಳುವಂತೆ ಬ್ರಿಟಿಷರು ಅವರನ್ನು ಪ್ರೋತ್ಸಾಹಿಸಿದರು. ಸಾ. ಶ. 1906 ರಲ್ಲಿ ಮುಸ್ಲಿಂ ನಿಯೋಗವೊಂದು ಭಾರತದ ವೈಸರಾಯ್ ಆಗಿದ್ದ ಮಿಂಟೋ ಅವರನ್ನು ಭೇಟಿ ಮಾಡಿತು. ಭೇಟಿಯ ಪ್ರೇರಣೆಯಿಂದಾಗಿ, ಸರ್ ಆಗಾಖಾನ್, ಢಾಕಾದ ನವಾಬ ಸಲಿಮುಲ್ಲ ಮತ್ತು ಇನ್ನಿತರರು ಸೇರಿ ಸಾ. ಶ. 1906 ರಲ್ಲಿ ಭಾರತ ಮುಸ್ಲಿಮ್ ಲೀಗ್‌ನ್ನು ಢಾಕಾದಲ್ಲಿ (ಈಗಿನ ಬಾಂಗ್ಲಾದೇಶದ ರಾಜಧಾನಿ) ಸ್ಥಾಪಿಸಿದರು.

## ಸೂರತ್ ಒಡಕು (1907)

ಬಂಗಾಲದ ವಿಭಜನೆಯ ವಿವಾದದ ಹಿನ್ನೆಲೆಯಲ್ಲಿ ತೀವ್ರಗಾಮಿಗಳು ದೇಶಾದ್ಯಂತ ಸ್ವದೇಶಿ ಮತ್ತು ಬಹಿಷ್ಕಾರ ಚಳವಳಿಯನ್ನು ವ್ಯಾಪಕವಾಗಿ ಹಮ್ಮಿಕೊಂಡರು. ಆದರೆ ಮಂದಗಾಮಿಗಳು ಅದನ್ನು ಬಂಗಾಲಕ್ಕೆ ಮಾತ್ರವೇ ಸೀಮಿತಗೊಳಿಸಲು ಬಯಸಿದ್ದರು. ಅಲ್ಲದೆ ಅವರು ಸರ್ಕಾರದೊಂದಿಗೆ ನೇರ ಸಂಘರ್ಷಕ್ಕಿಳಿಯಲು ಸಿದ್ಧರಿರಲಿಲ್ಲ. ತೀವ್ರಗಾಮಿಗಳು ಮತ್ತು ಮಂದಗಾಮಿಗಳ ನಡುವಿನ ಭಿನ್ನಾಭಿಪ್ರಾಯಗಳು ತೀವ್ರಗೊಂಡು ಕಾಂಗ್ರೆಸ್ಸಿನಲ್ಲಿ ರಾಜಕೀಯ ಒಡಕುಂಟಾಯಿತು. ಸಾ. ಶ. 1907 ರಲ್ಲಿ ಸೂರತ್‌ನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಮಂದಗಾಮಿಗಳು ಮತ್ತು ತೀವ್ರಗಾಮಿಗಳ ನಡುವೆ ಕಾಂಗ್ರೆಸ್ ಇಬ್ಭಾಗವಾಯಿತು.

ಕಾಂಗ್ರೆಸಿನಲ್ಲಾದ ಒಡಕಿನ ನಂತರ ಸರ್ಕಾರವು ತೀವ್ರಗಾಮಿಗಳ ವಿರುದ್ಧ ದಮನಕಾರಿ ಕ್ರಮಗಳನ್ನು ಕೈಗೊಂಡಿತು. ಅವರಲ್ಲಿ ಅನೇಕರನ್ನು ಸೆರೆಮನೆಗೆ ಕಳುಹಿಸಲಾಯಿತು, ಕೆಲವರನ್ನು ಗಡಿಪಾರು ಮಾಡಲಾಯಿತು. ತಿಲಕರಿಗೆ ಕರಿನೀರು ಶಿಕ್ಷೆಯನ್ನು ವಿಧಿಸಿ ಮಾಂಡಲೆ (ಬರ್ಮಾ) ಸೆರೆಮನೆಗೆ ಗಡಿಪಾರು ಮಾಡಲಾಯಿತು.

ತೀವ್ರಗಾಮಿಗಳನ್ನು ರಾಜಕೀಯವಾಗಿ ನಿಷ್ಕ್ರಿಯಗೊಳಿಸುವ ಸಲುವಾಗಿ ಬ್ರಿಟಿಷರು ಮಂದಗಾಮಿಗಳು ಮತ್ತು ಮುಸ್ಲಿಮರಿಗೆ ಶಾಸಕಾಂಗದಲ್ಲಿ ಹೆಚ್ಚಿನ ಪ್ರಾತಿನಿಧ್ಯವನ್ನು ನೀಡಿ ಒಲೈಸಲೆತ್ನಿಸಿದರು. ಈ ನಿಟ್ಟಿನಲ್ಲಿ ಮಿಂಟೋಮಾರ್ಲೆ ಸುಧಾರಣೆಗಳನ್ನು ಸಾ. ಶ. 1909 ರಲ್ಲಿ ಜಾರಿಗೆ ತಂದರು. ಈ ಕಾಯಿದೆಯಲ್ಲಿ ಮುಸ್ಲಿಮರಿಗೆ 'ಪ್ರತ್ಯೇಕ ಮತಕ್ಷೇತ್ರ'ವನ್ನು ಕಲ್ಪಿಸಿದರು. ಈ ಮಧ್ಯೆ ಮೊದಲ ಮಹಾಯುದ್ಧವು ಹಠಾತ್ ಆರಂಭವಾಯಿತು (ಸಾ. ಶ. 1914). ಇದು ರಾಷ್ಟ್ರೀಯ ಚಳುವಳಿಗೆ ಹೊಸ ಹುರುಪನ್ನು ನೀಡಿತು. ಸಾ. ಶ. 1916 ರಲ್ಲಿ ಲೋಕಮಾನ್ಯ ತಿಲಕರು ಮತ್ತು ಆ್ಯನಿ ಬೆಸೆಂಟರು ಹೋಂ ರೂಲ್ ಚಳವಳಿಯನ್ನು ಹಮ್ಮಿಕೊಂಡರು.

ಹೋಂ ರೂಲ್: ಇದು ಐರಿಷ್ ಹೋಂ ರೂಲ್ ಚಳವಳಿಯಿಂದ ಪ್ರೇರೇಪಿತವಾಗಿತ್ತು. ಇದರ ಮುಖ್ಯ ಉದ್ದೇಶವೆಂದರೆ ಭಾರತಕ್ಕೆ ಸ್ವಯಂ ಆಡಳಿತ ತರುವುದು. ತಿಲಕ್ ಮತ್ತು ಆ್ಯನಿಬೆಸೆಂಟರು 1916 ರಲ್ಲಿ ಪ್ರತ್ಯೇಕವಾಗಿ ಹೋಂ ರೂಲ್ ಚಳವಳಿಗಳನ್ನು ಮಹಾರಾಷ್ಟ್ರ ಮತ್ತು ತಮಿಳುನಾಡು ಪ್ರಾಂತ್ಯಗಳಲ್ಲಿ ಆರಂಭಿಸಿದರು.

## ರೌಲಟ್ ಕಾಯಿದೆ (1919)

ಸಾ. ಶ. 1917 ರ ಡಿಸೆಂಬರ್‌ನಲ್ಲಿ ನ್ಯಾಯಮೂರ್ತಿ ರೌಲಟ್‌ನ ಮಾರ್ಗದರ್ಶನದಲ್ಲಿ ಒಂದು ಸಮಿತಿ ರಚನೆಯಾಯಿತು. ಇದರ ಉದ್ದೇಶ ಭಾರತದ ಕ್ರಾಂತಿಕಾರಿ ಚಟುವಟಿಕೆಗಳನ್ನು ಹತ್ತಿಕ್ಕುವುದಾಗಿತ್ತು. ಅಂತಿಮವಾಗಿ ರೌಲಟ್ ಕಾಯಿದೆ ಸಾ. ಶ. 1919 ರ ಫೆಬ್ರವರಿಯಲ್ಲಿ ಜಾರಿಯಾಯಿತು. ಈ ಕಾಯಿದೆಯ ಪ್ರಕಾರ ಅನುಮಾನ ಬಂದ ಯಾವುದೇ ವ್ಯಕ್ತಿಯನ್ನು ಯಾವ ಕಾರಣವೂ ನೀಡದೆ ಸರ್ಕಾರ ಬಂಧಿಸಬಹುದಾಗಿತ್ತು. ಮುನ್ಸೂಚನೆ ನೀಡದೆ ಯಾವುದೇ ಪ್ರದೇಶವನ್ನು ಶೋಧ ಮಾಡಬಹುದಾಗಿತ್ತು. ಬಂಧಿತ ವ್ಯಕ್ತಿಗೆ ವಕೀಲರನ್ನು ನೇಮಿಸಿಕೊಳ್ಳುವ ಹಕ್ಕು ಕೂಡ ಇರಲಿಲ್ಲ. ಹೀಗಾಗಿ ಭಾರತೀಯರು ಇದನ್ನು ತೀವ್ರವಾಗಿ ವಿರೋಧಿಸಿದರು.

## ಜಲಿಯನ್‌ವಾಲಾಬಾಗ್ ಹತ್ಯಾಕಾಂಡ (1919)

ರೌಲಟ್ ಕಾಯಿದೆಯ ವಿರುದ್ಧ ಗಾಂಧೀಜಿ ಹಮ್ಮಿಕೊಂಡಿದ್ದ ಸತ್ಯಾಗ್ರಹದಿಂದಾಗಿ ಪಂಜಾಬಿನ ಬಹುತೇಕ ಭಾಗಗಳಲ್ಲಿ ಪ್ರತಿಭಟನೆಗಳು ಆರಂಭವಾದವು. ಸಾ. ಶ. 1919 ಏಪ್ರಿಲ್ 13 ರಂದು ಅಮೃತಸರದ ಸುವರ್ಣ ಮಂದಿರದಿಂದ ಸ್ವಲ್ಪ ದೂರದಲ್ಲಿರುವ ಜಲಿಯನ್‌ವಾಲಾಬಾಗ್ ಎಂಬ ಉದ್ಯಾನದಲ್ಲಿ ಸಭೆಯೊಂದನ್ನು ಆಯೋಜಿಸಲಾಗಿತ್ತು. ಸಭೆಯಲ್ಲಿ ತಮ್ಮ ನಾಯಕರಾಗಿದ್ದ ಸೈಫುದ್ದೀನ್ ಕಿಚ್ಲೂ ಮತ್ತು ಡಾ. ಸತ್ಯಪಾಲರ ಬಂಧನದ ವಿರುದ್ಧ ಪ್ರತಿಭಟನೆ ಮಾಡುವುದಾಗಿತ್ತು.



ಅಮೃತಸರದ ರಕ್ಷಣಾ ಪಾಲಕನಾಗಿದ್ದ ಜನರಲ್ ಡೈಯರ್‌ನು ಪ್ರತಿಭಟನೆ ಮಾಡುತ್ತಿದ್ದ ಜನರಿಗೆ ಬುದ್ಧಿ ಕಲಿಸಬೇಕೆಂದು ಉದ್ಯಾನದ ಏಕೈಕ ನಿರ್ಗಮನ ದ್ವಾರವನ್ನು ಮುಚ್ಚಿಸಿ ನಿರಾಯುಧರಾಗಿದ್ದ ಜನತೆಯ ಮೇಲೆ ಗುಂಡು ಹಾರಿಸಲು ಆಜ್ಞಾಪಿಸಿದನು. ಭಯಭೀತಿಯಿಂದ ಜನಸ್ತೋಮ ಒಮ್ಮೆಲೆ ಹೌಹಾರಿತು. ಸರ್ಕಾರಿ ವರದಿಯ ಪ್ರಕಾರ ಕೊಲ್ಲಲ್ಪಟ್ಟವರು ಕೇವಲ 379 ಮಂದಿ ಮಾತ್ರವಾಗಿತ್ತು. ಆದರೆ ವಾಸ್ತವವಾಗಿ ವರದಿಯ ಹೇಳಿಕೆಗಿಂತಲೂ ಹೆಚ್ಚು ಜನರು ಸತ್ತಿದ್ದರು.

## ಕ್ರಾಂತಿಕಾರಿ ರಾಷ್ಟ್ರೀಯತೆ

ತೀವ್ರವಾದಿಗಳಲ್ಲಿ ಕೆಲವು ಮಂದಿ ಸಶಸ್ತ್ರ ಕ್ರಾಂತಿಗೆ ಮುಂದಾದರು. ಇವರನ್ನು 'ಕ್ರಾಂತಿಕಾರಿ ರಾಷ್ಟ್ರೀಯವಾದಿಗಳು' ಎನ್ನುವರು. ಭಾರತಕ್ಕೆ ಸಂಪೂರ್ಣ ಸ್ವಾತಂತ್ರ್ಯವನ್ನು ತುರ್ತಾಗಿ ದೊರಕಿಸುವ ಧ್ಯೇಯ ಇವರದಾಗಿತ್ತು. ಗಾಢವಾದ ದೇಶಭಕ್ತಿ ಮತ್ತು ತ್ಯಾಗಮನೋಭಾವವು ಕ್ರಾಂತಿಕಾರಿ ರಾಷ್ಟ್ರೀಯವಾದದ ಮೂಲತತ್ವವಾಗಿತ್ತು.

ರಹಸ್ಯ ಸಂಘಟನೆಯನ್ನು ರೂಪಿಸಿಕೊಂಡ ಕ್ರಾಂತಿಕಾರಿಗಳಲ್ಲಿ ವಾಸುದೇವ ಬಲವಂತ ಫಡ್ಕೆ ಮೊದಲಿನವರು. ದಾಮೋದರ ಮತ್ತು ಬಾಲಕೃಷ್ಣ ಚಾಪೇಕರ್ ಸಹೋದರರು ಅವರ ರಹಸ್ಯ ಸಂಘಟನೆಯ ಜೀವನಾಡಿಗಳಾಗಿದ್ದರು. ಇವರಿಬ್ಬರನ್ನೂ ಬಂಧಿಸಿ ಗಲ್ಲಿಗೇರಿಸಲಾಯಿತು.

ನಮ್ಮ ದೇಶದ ಇತರ ಕ್ರಾಂತಿಕಾರಿಗಳೆಂದರೆ ವಿನಾಯಕ ದಾಮೋದರ ಸಾವರ್ಕರ್, ಖುದಿರಾಮ್ ಬೋಸ್, ಚಂದ್ರಶೇಖರ ಆಜಾದ್ ಮತ್ತು ಭಗತ್ ಸಿಂಗ್. ಖುದಿರಾಮ್ ಸ್ವಾತಂತ್ರ್ಯಹೋರಾಟದಲ್ಲಿ ನೇಣುಗಂಬ ಏರಿದ ಭಾರತದ ಮೊದಲ ಹುತಾತ್ಮ (ಸಾ. ಶ. 1908). ಆಗ ಅವನ ವಯಸ್ಸು ಕೇವಲ 19 ವರ್ಷ.

ವಿನಾಯಕ ದಾಮೋದರ ಸಾವರ್ಕರ್ ಮತ್ತೋರ್ವ ಕ್ರಾಂತಿಕಾರಿ. 1899 ರಲ್ಲಿ ಅವರು 'ಮಿತ್ರಮೇಳ' ಎನ್ನುವ ಪ್ರಥಮ ಗುಪ್ತ ಸಂಘಟನೆಯನ್ನು ಕಟ್ಟಿದರು. ಅವರಿಗೆ ಬ್ರಿಟಿಷ್ ಸರ್ಕಾರ ಜೀವಾವಧಿ ಕಾರಾಗೃಹವಾಸವನ್ನು ವಿಧಿಸಿ ಅಂಡಮಾನ್ ಜೈಲಿಗೆ ರವಾನಿಸಿತು. ಅವರು ಕ್ರೂರ ದೈಹಿಕ ಚಿತ್ರಹಿಂಸೆಯನ್ನು ಅನುಭವಿಸಿದ ಅಂಡಮಾನ್ ಜೈಲಿನಲ್ಲಿ ಭಾರತ ಸರ್ಕಾರ ಅವರ ಸ್ಮಾರಕವನ್ನು ನಿರ್ಮಿಸಿದೆ.

ಚಂದ್ರಶೇಖರ ಆಜಾದ್ 'ಹಿಂದೂಸ್ತಾನ್ ಸೋಷಿಯಲಿಸ್ಟ್ ರಿಪಬ್ಲಿಕನ್ ಅಸೋಸಿಯೇಷನ್'ಗೆ ಸೇರಿ ಕಾಕೋರಿ ಪಿತೂರಿ, ಶಾಸನ ಸಭೆಯ ಬಾಂಬ್ ಘಟನೆ ಹಾಗೂ ಲಾಹೋರಿನಲ್ಲಿ ಬ್ರಿಟಿಷ್ ಅಧಿಕಾರಿ ಸ್ಯಾಂಡರ್ಸ್‌ನ ಮೇಲೆ ಗುಂಡಿನ ದಾಳಿ ಮುಂತಾದ ಹಲವು ಪ್ರಕರಣಗಳಲ್ಲಿ ಭಾಗಿಯಾಗಿದ್ದರು.

ಬ್ರಿಟಿಷ್ ಸೈನಿಕರಿಂದ ತಪ್ಪಿಸಿಕೊಳ್ಳಲು ಆಜಾದ್ ಒಂದು ಸಣ್ಣ ಪಿಸ್ತೂಲಿನೊಂದಿಗೆ ಏಕಾಂಗಿ ಹೋರಾಟ ನಡೆಸಿದರು. ಕೇವಲ ಒಂದು ಗುಂಡು ಉಳಿದಿದ್ದಾಗ ತನ್ನ ಕಪೋಲಕ್ಕೆ ಗುರಿಯಿಟ್ಟು ಹಾರಿಸಿಕೊಂಡು, ತಾನು ಬಂಧನಕ್ಕೊಳಗಾಗುವುದಿಲ್ಲ ಎನ್ನುವ ತನ್ನ ಪ್ರತಿಜ್ಞೆಯನ್ನು ಉಳಿಸಿಕೊಂಡರು. ಭಗತ್ ಸಿಂಗ್, ರಾಜಗುರು, ಸುಖದೇವ್, ಭಗವತೀ ಚರಣ್ ಮತ್ತು ಗಯಾಪ್ರಸಾದರಂತಹ ಅನೇಕ ಹುತಾತ್ಮರು ಬ್ರಿಟಿಷರ ದಾಸ್ಯದಿಂದ ಭಾರತ ಬಿಡುಗಡೆ ಹೊಂದಲು ತಮ್ಮನ್ನೇ ಅರ್ಪಿಸಿಕೊಂಡರು.

ಭಗತ್ ಸಿಂಗ್ ಹಿಂದೂಸ್ತಾನ್ ಸಮಾಜವಾದಿ ರಿಪಬ್ಲಿಕನ್ ಸಂಘಟನೆಯನ್ನು ಸೇರಿ ಅದರ ಪ್ರಧಾನ ಕಾರ್ಯದರ್ಶಿಯಾದರು. ಸಾ. ಶ. 1929 ರಲ್ಲಿ ಭಗತ್ ಸಿಂಗ್, ರಾಜಗುರು ಮತ್ತು ಸುಖದೇವ್ ದಿಲ್ಲಿಯಲ್ಲಿ ಕೇಂದ್ರೀಯ ಶಾಸನಸಭೆಯ ಮೇಲೆ ಬಾಂಬೆಸೆದರು. ಲಾಹೋರ್ ಸೆಂಟ್ರಲ್ ಜೈಲಿನಲ್ಲಿ ಈ ಮೂವರನ್ನು ಗಲ್ಲಿಗೇರಿಸಲಾಯಿತು. ಭಗತ್‌ಸಿಂಗ್ "ಇಂಕ್ವಿಲಾಬ್ ಜಿಂದಾಬಾದ್" (ಕ್ರಾಂತಿ ಚಿರಾಯುವಾಗಲಿ) ಎಂಬ ಘೋಷಣೆಯನ್ನು ಮೊದಲ ಬಾರಿಗೆ ಮೊಳಗಿಸಿದ ಭಾರತೀಯರಾಗಿದ್ದಾರೆ.



## ಮುಖ್ಯ ಇಸವಿಗಳು

ಭಾರತ ರಾಷ್ಟ್ರೀಯ ಕಾಂಗ್ರೆಸಿನ ಸ್ಥಾಪನೆ- 1885

ಮಂದಗಾಮಿಗಳ ಕಾಲ- 1885-1905

ತೀವ್ರಗಾಮಿಗಳ ಕಾಲ- 1905-1919

ಬಂಗಾಲದ ವಿಭಜನೆ- 1905

ಮುಸ್ಲಿಂ ಲೀಗ್‌ನ ಸ್ಥಾಪನೆ- 1906

ಸೂರತ್ ಒಡಕು- 1907

ಜಲಿಯನ್‌ವಾಲಾಬಾಗ್ ಹತ್ಯಾಕಾಂಡ- 1919

## ಅಭ್ಯಾಸಗಳು

### I. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

1. ರಾಷ್ಟ್ರೀಯತೆ ಎಂದರೇನು?
2. ಭಾರತೀಯ ರಾಷ್ಟ್ರೀಯ ಕಾಂಗ್ರೆಸನ್ನು ಯಾರು, ಯಾವಾಗ ಸ್ಥಾಪಿಸಿದವರು?
3. ಬಂಗಾಲ ವಿಭಜನೆ ಯಾವಾಗ ಆಯಿತು?
4. ಬಾಲಗಂಗಾಧರ ತಿಲಕರ ಪ್ರಸಿದ್ಧ ಘೋಷಣೆ ಯಾವುದು?
5. ಭಾರತ ಮುಸ್ಲಿಂ ಲೀಗ್ ಯಾವಾಗ ಸ್ಥಾಪನೆಯಾಯಿತು?
6. ಲಾಲ್, ಬಾಲ್ ಮತ್ತು ಪಾಲ್' ಎಂದು ಜನಪ್ರಿಯರಾದ ರಾಷ್ಟ್ರೀಯ ನಾಯಕರು ಯಾರು?
7. ಹೋಂ ರೂಲ್ ಚಳವಳಿಗಳನ್ನು ಆರಂಭಿಸಿದವರು ಯಾರು?
8. ಜಲಿಯನ್‌ವಾಲಾಬಾಗ್ ಹತ್ಯಾಕಾಂಡ ಯಾವಾಗ ಸಂಭವಿಸಿತು? ಈ ಘಟನೆಗೆ ಕಾರಣವಾದ ಬ್ರಿಟಿಷ್ ಪೋಲೀಸ್ ಅಧಿಕಾರಿ ಯಾರು?
9. ಯಾವುದಾದರೂ ಒಂದು ಗುಪ್ತ ಕ್ರಾಂತಿಕಾರಿ ಸಂಘವನ್ನು ಹೆಸರಿಸಿರಿ.

10. ‘ಇಂಕ್ವಿಲಾಬ್ ಜಿಂದಾಬಾದ್’ ಘೋಷಣೆ ನೀಡಿದವರು ಯಾರು?

## II. ಈ ಕೆಳಗಿನ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿರಿ.

1. ಭಾರತದ ರಾಷ್ಟ್ರೀಯತೆಯ ಬೆಳವಣಿಗೆಗೆ ಕಾರಣವಾದ ಅಂಶಗಳನ್ನು ತಿಳಿಸಿ.
2. ಭಾರತೀಯ ರಾಷ್ಟ್ರೀಯ ಕಾಂಗ್ರೆಸಿನ ಉದ್ದೇಶಗಳನ್ನು ಪಟ್ಟಿ ಮಾಡಿ.
3. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಕ್ರಾಂತಿಕಾರಿಗಳ ಪಾತ್ರವೇನು?

## ಚಟುವಟಿಕೆಗಳು

1. ದಾದಾಬಾಯಿ ನವರೋಜಿ ಮತ್ತು ಬಾಲಗಂಗಾಧರ ತಿಲಕ್ ಅವರ ಜೀವನ ಚರಿತ್ರೆಯನ್ನು ಓದಿರಿ.
2. ಕ್ರಾಂತಿಕಾರಿಗಳ ಭಾವಚಿತ್ರಗಳನ್ನು ಮಾಹಿತಿಯೊಂದಿಗೆ ಸಂಗ್ರಹಿಸಿ ಆಲ್ಬಂ ತಯಾರಿಸಿರಿ.
3. ಈ ಕೆಳಗಿನ ಕ್ರಾಂತಿಕಾರರ ಜೀವನ ಚರಿತ್ರೆಯನ್ನು ಓದಿ, ಲೇಖನವೊಂದನ್ನು ಬರೆದು ಶಾಲೆಯ ಬುಲೆಟಿನ್ ಬೋರ್ಡಿನಲ್ಲಿ ಪ್ರಕಟಿಸಿರಿ.

ವಾಸುದೇವ ಬಲವಂತ ಫಡ್ಕೆ, ಖುದಿರಾಮ್ ಬೋಸ್, ಚಂದ್ರಶೇಖರ ಆಜಾದ್, ಭಗತ್ ಸಿಂಗ್, ಮೇಡಂ ಕಾಮಾ.

## ಗಾಂಧಿ ಯುಗ (1919-1947)

ಮಹಾತ್ಮ ಗಾಂಧೀಜಿಯವರನ್ನು ನಾವು ಪ್ರೀತಿಯಿಂದ ‘ಬಾಪು’ ಎಂದು ಸ್ಮರಿಸಿಕೊಳ್ಳುತ್ತೇವೆ. ಭಾರತದ ರಾಷ್ಟ್ರೀಯ ಹೋರಾಟದಲ್ಲಿ ಅವರು ಮಹಾನ್ ನಾಯಕರಾಗಿದ್ದರು. ಅಲ್ಲದೆ ಶೋಷಣೆ, ಅಸ್ಪೃಶ್ಯತೆಯ ನಿವಾರಣೆ ಮತ್ತು ಹಿಂದೂಮುಸ್ಲಿಂ ಸಾಮರಸ್ಯಕ್ಕಾಗಿ ತಮ್ಮನ್ನು ಪೂರ್ಣವಾಗಿ ಮುಡಿಪಾಗಿಟ್ಟಿದ್ದರು. ಅವರ ನೇತೃತ್ವದ ರಾಜಕೀಯ ಹೋರಾಟದ ಈ ಕಾಲಾವಧಿಯನ್ನು ‘ಗಾಂಧೀ ಯುಗ’ (ಸಾ. ಶ. 1919-1947) ಎಂದು ಕರೆಯಲಾಗಿದೆ.

1. ಮಹಾತ್ಮ ಗಾಂಧಿ: ಅಹಿಂಸೆ ಮತ್ತು ಸತ್ಯಾಗ್ರಹ ನೀತಿಯು ಗಾಂಧೀಜಿಯವರ ಹೋರಾಟದ ಅಸ್ತ್ರಗಳಾಗಿದ್ದವು. ಅವರು ಸ್ವಾತಂತ್ರ್ಯ ಚಳುವಳಿಗೆ ಜನಾಂದೋಲನದ ಸ್ವರೂಪವನ್ನು ತಂದುಕೊಟ್ಟರು. ಸರಳತೆ, ಸಜ್ಜನಿಕೆ, ಸತ್ಯಸಂದತೆ ಅವರ ಯಶಸ್ಸಿನ ಸೂತ್ರಗಳಾಗಿದ್ದವು.

ಆರಂಭಿಕ ಜೀವನ: ಗಾಂಧೀಜಿಯವರು ಸಾ. ಶ. 1869 ರ ಅಕ್ಟೋಬರ್ 2 ರಂದು ಗುಜರಾತ್ ರಾಜ್ಯದ ಪೋರಬಂದರ್ ಎಂಬಲ್ಲಿ ಕರಮಚಂದ ಗಾಂಧಿ ಮತ್ತು ಪುತಲೀಬಾಯಿಯವರ ಮಗನಾಗಿ ಜನಿಸಿದರು.

ಗಾಂಧೀಜಿಯವರ ಜೀವನದ ಮೇಲೆ ಪ್ರಭಾವ ಬೀರಿದ ಪ್ರಮುಖ ಕೃತಿಗಳೆಂದರೆ: ಭಗವದ್ಗೀತೆ, ಜಾನ್ ರಸ್ಕಿನನ ‘ಕೊನೆಯ ತನಕ’ (Unto this Last), ಟಾಲ್‌ಸ್ಟಾಯ್ ಅವರ

‘ನಿನ್ನಂತರಂಗವೇ ದೇವರ ರಾಜ್ಯ’ (The Kingdom of God is Within You) ಮತ್ತು ‘ಸತ್ಯ ಹರಿಶ್ಚಂದ್ರ ನಾಟಕ.’

## ದಕ್ಷಿಣ ಆಫ್ರಿಕದಲ್ಲಿ ಗಾಂಧೀಜಿ

ಗಾಂಧೀಜಿಯವರ ಆರಂಭಿಕ ಶಿಕ್ಷಣ ಪೋರಬಂದರಿನಲ್ಲಾಯಿತು. ಉನ್ನತ ಶಿಕ್ಷಣಕ್ಕಾಗಿ ಅವರು ಇಂಗ್ಲೆಂಡಿಗೆ ತೆರಳಿದರು. ಅವರು ಬ್ರಿಟನಿನಲ್ಲಿ ಕಾನೂನು ಪದವಿ ಪಡೆದರು. 1891 ರಲ್ಲಿ ಭಾರತಕ್ಕೆ ಹಿಂದಿರುಗಿ ರಾಜ್‌ಕೋಟ್ ಮತ್ತು ಮುಂಬೈಯಲ್ಲಿ ವಕೀಲಿ ವೃತ್ತಿಯಲ್ಲಿ ತೊಡಗಿದರು. ನಂತರ ದಾದಾ ಅಬ್ದುಲ್ಲಾ ಕಂಪನಿಯ ಆಹ್ವಾನದ ಮೇರೆಗೆ ಕಾನೂನು ಸಲಹೆಗಾರರಾಗಿ ದಕ್ಷಿಣ ಆಫ್ರಿಕಾಕ್ಕೆ ತೆರಳಿದರು.

ಗಾಂಧೀಜಿಯವರು ದಕ್ಷಿಣ ಆಫ್ರಿಕಾದಲ್ಲಿದ್ದಾಗ, ಭಾರತೀಯರು ಅಲ್ಲಿ ಕೆಳದರ್ಜೆಯವರಾಗಿ ಬಾಳುವುದನ್ನು ಕಂಡು ಆಘಾತಕ್ಕೊಳಗಾದರು. ‘ಬಿಳಿ’ ಸರ್ಕಾರದ ಜನಾಂಗೀಯ ನೀತಿಯನ್ನು ಅವರು ವಿರೋಧಿಸಿದರು. ಅವರು ಸತ್ಯಾಗ್ರಹ ಮತ್ತು ಅಹಿಂಸಾ ಮಾರ್ಗಗಳ ಮೂಲಕ ಸರ್ಕಾರದ ಜನಾಂಗೀಯ ಪೂರ್ವಾಗ್ರಹವನ್ನು ಬದಲಾಯಿಸುವಲ್ಲಿ ಸಾಕಷ್ಟು ಯಶಸ್ಸನ್ನು ಕಂಡರು.

ಸತ್ಯಾಗ್ರಹ ಸಿದ್ಧಾಂತವು ಸಂಸ್ಕೃತದ ಎರಡು ಪದಗಳಿಂದ ಕೂಡಿದೆ: ‘ಸತ್ಯ’ ಎಂದರೆ ವಾಸ್ತವಿಕ ಸಂಗತಿ, ‘ಆಗ್ರಹ’ ಎಂದರೆ ಒತ್ತಾಯ. ಇದರರ್ಥ “ಸತ್ಯದಪರ ದೃಢವಾಗಿ ನಿಲ್ಲು”.

ಚಟುವಟಿಕೆ: ಗಾಂಧೀಜಿಯವರು ದಕ್ಷಿಣ ಆಫ್ರಿಕದಲ್ಲಿ ನಡೆಸಿದ ಸತ್ಯಾಗ್ರಹ ಮತ್ತು ಅಹಿಂಸಾತ್ಮಕ ಹೋರಾಟಗಳನ್ನು ಕುರಿತು ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಿರಿ.

## ಆರಂಭಿಕ ರಾಜಕೀಯ ಜೀವನ

ಸಾ. ಶ. 1915 ರಲ್ಲಿ ಭಾರತಕ್ಕೆ ಹಿಂತಿರುಗಿದ ನಂತರ ಗಾಂಧೀಜಿಯವರು ಅಹಮದಾಬಾದ್ ಬಳಿ ಸಾಬರಮತಿ ಆಶ್ರಮವನ್ನು (ಸಾ. ಶ. 1916) ಸ್ಥಾಪಿಸಿದರು. ತಮ್ಮ ರಾಜಕೀಯ ಗುರು ಗೋಪಾಲಕೃಷ್ಣ ಗೋಖಲೆಯವರ ಮಾರ್ಗದರ್ಶನದ ಮೇರೆಗೆ ಭಾರತಾದ್ಯಂತ ಪ್ರವಾಸ ಮಾಡಿ ಜನತೆಯ ಶೋಚನೀಯ ಸ್ಥಿತಿಯನ್ನು ಕಂಡರು. ಚಂಪಾರಣ್ ಮತ್ತು ಖೇಡಾಗಳಲ್ಲಿ ರೈತರ ಪರ ಹೋರಾಟ ನಡೆಸಿದರು.

ಚಂಪಾರಣ್: ಚಂಪಾರಣ್ (ಬಿಹಾರ) ರೈತರು ಪ್ಲಾಂಟರುಗಳ ವಿರುದ್ಧ ಹೊಂದಿರುವ ಅಸಮಾಧಾನ ಮತ್ತು ಪ್ರತಿಭಟನೆಗೆ ಸುದೀರ್ಘ ಇತಿಹಾಸವಿದೆ. ಪ್ಲಾಂಟರ್ಗಳು ಬಲವಂತವಾಗಿ ನೀಲಿ ಬೆಳೆಯುವಂತೆ ರೈತರನ್ನು ಒತ್ತಾಯಿಸುತ್ತಿದ್ದರು. ಗಾಂಧೀಜಿ ಅವರ ವಿರುದ್ಧ ಸಾ. ಶ. 1917 ರಲ್ಲಿ ಚಂಪಾರಣ್ ಸತ್ಯಾಗ್ರಹವನ್ನು ಆರಂಭಿಸಿದರು. ಕೊನೆಯಲ್ಲಿ ರೈತರ ಸಮಸ್ಯೆ ಪರಿಹಾರ ಕಂಡಿತು. ಈ ಚಳವಳಿಯ ಮೂಲಕ ಬಾಬು ರಾಜೇಂದ್ರ ಪ್ರಸಾದ್ ಪ್ರಮುಖ ನಾಯಕರಾಗಿ ರೂಪುಗೊಂಡರು.

ಖೇಡಾ ರೈತ ಹೋರಾಟ: ಖೇಡಾ ಗುಜರಾತ್ ರಾಜ್ಯದ ಪ್ರಮುಖ ಜಿಲ್ಲೆ. ಸಾ.ಶ. 1918ರ ಸಂದರ್ಭದಲ್ಲಿ ಬೆಳೆಗಳು ವಿಫಲವಾಗಿ ರೈತರು ಆರ್ಥಿಕವಾಗಿ ಸಂಕಷ್ಟಕ್ಕೆ ಸಿಲುಕಿದರು. ಈ ಹಿನ್ನಲೆಯಲ್ಲಿ ಅವರು ಕಂದಾಯ ಕಟ್ಟುವುದರಿಂದ ವಿನಾಯಿತಿ ನೀಡಬೇಕೆಂದು ಸರಕಾರಕ್ಕೆ ಮನವಿ ಸಲ್ಲಿಸಿದರು. ಸರಕಾರ ಇವರ ಮನವಿಯನ್ನು ತಿರಸ್ಕರಿಸಿದ್ದಲ್ಲದೆ, ಕಂದಾಯ ಪರಿಣಾಮವಾಗಿ ಖೇಡಾದಲ್ಲಿ ರೈತ ಹೋರಾಟ ಪ್ರಾರಂಭವಾಯಿತು. ಗಾಂಧೀಜಿಯವರು ಈ ಹೋರಾಟಕ್ಕೆ ತಮ್ಮ ಪೂರ್ಣ ಬೆಂಬಲವನ್ನು ನೀಡಿದ್ದಲ್ಲದೆ, ರೈತರು ಕಂದಾಯವನ್ನು ಕಟ್ಟಬಾರದೆಂದು ತಿಳಿಸಿದರು. ಅಂತಿಮವಾಗಿ ತಮ್ಮ ನಿರ್ಧಾರವನ್ನು ಬದಲಾಯಿಸಿಕೊಂಡ ಸರಕಾರ, ಯಾರಿಗೆ ಸಾಧ್ಯವಾಗುವುದೋ ಅಂತಹ ರೈತರು ಕಂದಾಯವನ್ನು ಕಟ್ಟಬಹುದೆಂದು ತಿಳಿಸಿತು. ಇದನ್ನು ಒಪ್ಪಿದ ಗಾಂಧೀಜಿಯವರು ಚಳವಳಿಯನ್ನು ಕೈಬಿಡಲು ಒಪ್ಪಿದರು. ಈ ಹೋರಾಟದ ಮೂಲಕ ರಾಜಕೀಯವಾಗಿ ಬೆಳೆದ ನಾಯಕರೆಂದರೆ ಸರದಾರ ವಲ್ಲಭಭಾಯಿ ಪಟೇಲರು.

## ಸ್ವಾತಂತ್ರ್ಯ ಹೋರಾಟದಲ್ಲಿ ಗಾಂಧೀಜಿ

ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಸಾ. ಶ. 1919 ನೇ ಇಸವಿ ಒಂದು ಮಹತ್ವದ ಮೈಲಿಗಲ್ಲಾಗಿದೆ. ಇದು ಗಾಂಧೀಜಿಯವರು ಭಾರತದ ರಾಜಕೀಯ ರಂಗವನ್ನು ಪ್ರವೇಶಿಸಿದ ವರ್ಷ. ಬ್ರಿಟಿಷರನ್ನು ದೈಹಿಕ ಬಲದ ಮೂಲಕ ಹೊರದೂಡಲು ಸಾಧ್ಯವಿಲ್ಲವೆಂಬ ಸತ್ಯವನ್ನು ಅವರು ಮನಗಂಡಿದ್ದರು. ಸಾ. ಶ. 1919 ರಲ್ಲಿ ಗಾಂಧೀಯವರು ರೌಲಟ್ ಕಾಯಿದೆಯ ಜಾರಿ ಮತ್ತು ಜಲಿಯನ್‌ವಾಲಾಬಾಗ್ ಘೋರ ಹಿಂಸಾಕೃತ್ಯದ ವಿರುದ್ಧ ಚಳವಳಿ ಹೂಡಿದರು. ಅಲ್ಲದೆ ಖಿಲಾಫತ್ ಚಳವಳಿಯ ನಾಯಕತ್ವ ವಹಿಸಿದರು. ಈ ಮೂಲಕ ಹಿಂದೂ ಮತ್ತು ಮುಸ್ಲಿಮರ ನಡುವೆ ಸಾಮರಸ್ಯ ಏರ್ಪಡಿಸುವುದು ಅವರ ಉದ್ದೇಶವಾಗಿತ್ತು.

ಖಿಲಾಫತ್ ಚಳವಳಿ ಎಂದರೇನು?: ಟರ್ಕಿ ಸಾಮ್ರಾಜ್ಯವು ಖಲೀಫರ ಕೈಕೆಳಗಿತ್ತು. ಖಲೀಫ ಜಗತ್ತಿನ ಎಲ್ಲಾ ಮುಸಲ್ಮಾನರ ಪರಮೋಚ್ಚ ಧಾರ್ಮಿಕ ಮುಖಂಡರು. ಒಂದನೆಯ ವಿಶ್ವಸಮರದಲ್ಲಿ ಟರ್ಕಿ ಬ್ರಿಟನಿನ ವಿರುದ್ಧವಾಗಿ ನಿಂತಿದ್ದು, ಯುದ್ಧದಲ್ಲಿ ಪರಾಭವಗೊಂಡಿತು. ಟರ್ಕಿಯ ಭಾಗವಾಗಿದ್ದ ಅರೇಬಿಯಾ, ಜೋರ್ಡಾನ್, ಇರಾಕ್ ಇತ್ಯಾದಿಗಳು ಸ್ವತಂತ್ರ ರಾಜ್ಯಗಳಾದವು. 1919 ರಲ್ಲಿ ಕಮಾಲ್ ಪಾಷಾ ಎಂಬ ನಾಯಕನು ಟರ್ಕಿಯ ಖಲೀಫರ ಅರಸೊತ್ತಿಗೆಯನ್ನು ಮೂಲೆಗೊತ್ತಿ ಅಧಿಕಾರಕ್ಕೇರಿದನು. ಇದಕ್ಕೆ ಪ್ರತಿಕ್ರಿಯಿಸಿದ ಭಾರತೀಯ ಮುಸ್ಲಿಮರು ಖಲೀಫರ ಪರವಾಗಿಯೂ ಬ್ರಿಟನಿನ ವಿರುದ್ಧವಾಗಿಯೂ ಆಂದೋಲನ ನಡೆಸಿದರು. ಇದನ್ನು ಖಿಲಾಫತ್ 'ಚಳವಳಿ' ಎನ್ನುವರು. ಗಾಂಧೀಜಿಯವರು ಚಳವಳಿಯ ಮುಂದಾಳುತನವನ್ನು ವಹಿಸಿದರು. ಮೊಹಮ್ಮದ್ ಆಲಿ ಮತ್ತು ಶೌಕತ್ ಆಲಿ (ಆಲಿ ಸಹೋದರರು) ಈ ಚಳವಳಿಯ ಪ್ರಮುಖ ನಾಯಕರಾಗಿದ್ದರು.

2. ಅಸಹಕಾರ ಚಳವಳಿ (1920-22): ಗಾಂಧೀಜಿಯವರ ನಾಯಕತ್ವದಲ್ಲಿ ಅಸಹಕಾರ ಚಳವಳಿಯು ಸಾ. ಶ. 1920 ರಲ್ಲಿ ಆರಂಭವಾಯಿತು. ಅವರು ಸರ್ಕಾರದೊಂದಿಗೆ ಅಸಹಕಾರ ತೋರಬೇಕೆಂದು ಜನತೆಗೆ ಕರೆಕೊಟ್ಟರಲ್ಲದೆ 'ಸ್ವರಾಜ್ಯ'ಕ್ಕಾಗಿ ಒತ್ತಾಯಿಸಬೇಕೆಂದರು. ಈ ಕಾರ್ಯಕ್ರಮದ ಅಂಗವಾಗಿ ನ್ಯಾಯಾಲಯಗಳು, ಶೈಕ್ಷಣಿಕ ಸಂಸ್ಥೆಗಳು, ಶಾಸಕಾಂಗ ಸಭೆಗಳಿಗೆ ಚುನಾವಣೆ ಮತ್ತು ಬ್ರಿಟಿಷ್ ಸರಕುಗಳನ್ನು ಬಹಿಷ್ಕರಿಸಲಾಯಿತು. ಇದರೊಂದಿಗೆ ಸರ್ಕಾರಿ ಕಾರ್ಯಕ್ರಮಗಳನ್ನು ಬಹಿಷ್ಕರಿಸುವುದಲ್ಲದೆ,

ಸರ್ಕಾರ ನೀಡಿದ್ದ ಬಿರುದುಗಳನ್ನು ಹಿಂತಿರುಗಿಸಲಾಯಿತು. ಈ ಕಾಲಘಟ್ಟದಲ್ಲಿ ಪ್ರಮುಖ ನಾಯಕರಾದ ಚಿತ್ತರಂಜನ್ ದಾಸ್, ಮೋತಿಲಾಲ್ ನೆಹರು, ವಲ್ಲಭಭಾಯ್ ಪಟೇಲ್, ಸುಭಾಷ್ಚಂದ್ರ ಬೋಸ್ ಇವರುಗಳು ಚಳವಳಿಗೆ ಸೇರಿದರು. ಅವರ ಅಹಿಂಸಾತ್ಮಕ ಮತ್ತು ಸತ್ಯಾಗ್ರಹದಂತಹ ವಿಧಾನಗಳಿಂದ ಸಮಾಜದ ಎಲ್ಲಾ ಸ್ತರದ ವರ್ಗದವರು ಆಕರ್ಷಿತರಾಗಿ ಚಳವಳಿಯಲ್ಲಿ ಭಾಗಿಯಾದರು. ಈ ಚಳವಳಿಯಲ್ಲಿ ವಿದ್ಯಾರ್ಥಿಗಳು, ರೈತರು ಮತ್ತು ಮಹಿಳೆಯರಿದ್ದರು. ಇದು ಭಾರತೀಯರಿಗೆ ಹೊಸ ಅನುಭವವಾಗಿತ್ತು. ರವೀಂದ್ರನಾಥ್ ಟಾಗೋರ್ ತಮ್ಮ 'ನೈಟ್‌ಹುಡ್' ಪ್ರಶಸ್ತಿಯನ್ನು ಹಾಗೂ ಗಾಂಧೀಜಿಯವರು ತಮ್ಮ 'ಕೈಸರ್‌ಇಹಿಂದ್' ಪದವಿಯನ್ನು ಬ್ರಿಟಿಷ್ ಸರ್ಕಾರಕ್ಕೆ ಹಿಂತಿರುಗಿಸಿದರು. ಇದೇ ವೇಳೆ ಸರ್ಕಾರವು ಚಳವಳಿಯನ್ನು ಹತ್ತಿಕ್ಕಲು ದಮನಕಾರಿ ಕ್ರಮಗಳನ್ನು ಅನುಸರಿಸಿತು. ಇದಕ್ಕೆ ಉತ್ತರವೆಂಬಂತೆ ಉತ್ತರ ಪ್ರದೇಶದ ಚೌರಿಚೌರಾದಲ್ಲಿ ಉದ್ರಿಕ್ತ ಜನಸ್ತೋಮ ಹಿಂಸಾಕೃತ್ಯದಲ್ಲಿ ತೊಡಗಿ ಅಲ್ಲಿನ ಠಾಣೆಯ 22 ಜನ ಪೋಲೀಸರನ್ನು ಜೀವಂತ ಸುಟ್ಟಿತು (ಸಾ. ಶ. 1922). ಗಾಂಧೀಜಿಯವರು ಈ ಘಟನೆಯನ್ನು ಗಂಭೀರವಾಗಿ ಪರಿಗಣಿಸಿದರು.

ಗಾಂಧೀಜಿಯವರು ಸಾ. ಶ 1924 ರಿಂದ 1929 ರವರೆಗೆ ರಚನಾತ್ಮಾಕ ಕಾರ್ಯಕ್ರಮಗಳಾದ ಖಾದಿಯನ್ನು ಜನಪ್ರಿಯಗೊಳಿಸುವುದು ಮತ್ತು ಹರಿಜನ ಉದ್ಧಾರ ಕಾರ್ಯಗಳಲ್ಲಿ ತಮ್ಮನ್ನು ಸಮರ್ಪಿಸಿಕೊಂಡರು. ಸ್ವರಾಜ್ಯವಾದಿಗಳಾದ ಸಿ. ಆರ್. ದಾಸ್ ಮತ್ತು ಮೋತಿಲಾಲ್ ನೆಹರು ಅವರ ನೇತೃತ್ವದಲ್ಲಿ ರಾಷ್ಟ್ರೀಯ ಹೋರಾಟದ ಚಟುವಟಿಕೆಗಳು ಮುಂದುವರಿದವು.

## ಗಾಂಧೀಜಿಯವರ ಪ್ರಮುಖ ಕೃತಿಗಳು ಮತ್ತು ಪತ್ರಿಕೆಗಳು

'ಸತ್ಯದೊಂದಿಗೆ ನನ್ನ ಪ್ರಯೋಗಗಳು', 'ಹಿಂದ್ ಸ್ವರಾಜ್', 'ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ', ಇವು ಗಾಂಧೀಜಿ ಅವರ ಕೃತಿಗಳು. 'ಹರಿಜನ' ಮತ್ತು 'ಯಂಗ್ ಇಂಡಿಯಾ' ಇವು ಅವರು ಸಂಪಾದಕರಾಗಿದ್ದ ವೃತ್ತಪತ್ರಿಕೆಗಳು.

### ನೆಹರು ವರದಿ (ಸಾ.ಶ. 1927)

ಬ್ರಿಟಿಷರು ಭಾರತೀಯ ರಾಜಕೀಯ ನಾಯಕರಿಗೆ ಎಲ್ಲಾ ಸಮುದಾಯದವರು ಒಪ್ಪುವಂತಹ ಸಂವಿಧಾನವನ್ನು ರಚಿಸಿಕೊಳ್ಳುವಂತೆ ಸವಾಲೆಸೆದರು. ಭಾರತೀಯ ಸರ್ವಪಕ್ಷಗಳ ಸಮ್ಮೇಳನದಲ್ಲಿ ಮೋತಿಲಾಲ್ ನೆಹರು ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಲಾಯಿತು. ಅದು ಬ್ರಿಟಿಷ್ ಪ್ರಭುತ್ವದಡಿಯಲ್ಲಿ ಸ್ವಯಂ ಆಡಳಿತದ ಸ್ಥಾನಮಾನವನ್ನು ಒಪ್ಪಿದ್ದಲ್ಲದೆ ಅಂತಿಮವಾಗಿ ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆಯುವ ಗುರಿಯನ್ನೂ ವ್ಯಕ್ತಪಡಿಸಿತು.

## ಸೈಮನ್ ನಿಯೋಗ (ಸಾ. ಶ. 1928)

ಬ್ರಿಟಿಷ್ ಸರ್ಕಾರ ಸಾ. ಶ. 1919 ರ ಸುಧಾರಣೆಗಳು ಭಾರತದ ಪ್ರಾಂತಗಳಲ್ಲಿ ಹೇಗೆ ಕಾರ್ಯಗತಗೊಂಡಿವೆ ಎಂದು ಅಧ್ಯಯನ ಮಾಡಿ ವರದಿ ನೀಡಲು ಸೈಮನ್ ನಿಯೋಗವನ್ನು (ಸಾ. ಶ. 1928) ಭಾರತಕ್ಕೆ ಕಳುಹಿಸಿತು. ನಿಯೋಗದಲ್ಲಿದ್ದ ಎಲ್ಲಾ ಸದಸ್ಯರೂ ಇಂಗ್ಲಿಷರೇ ಆಗಿದ್ದು, ಭಾರತೀಯರಿಗೆ ಅದರಲ್ಲಿ ಪ್ರಾತಿನಿಧ್ಯವಿರಲಿಲ್ಲ.

ಆದ್ದರಿಂದ ಭಾರತೀಯರು “ಸೈಮನ್ನರೆ ಹಿಂತಿರುಗಿ” ಎಂಬ ಘೋಷಣೆಯನ್ನು ಮೊಳಗಿಸುವುದರೊಂದಿಗೆ ನಿಯೋಗವನ್ನು ಬಹಿಷ್ಕರಿಸಿದರು. ಲಾಹೋರಿನಲ್ಲಿ ನಡೆದ ಬಹಿರಂಗ ಪ್ರತಿಭಟನೆಯು ತೀವ್ರ ಸ್ವರೂಪವನ್ನು ತಾಳಿತು. ಈ ಸಂದರ್ಭದಲ್ಲಿ ನಡೆದ ಲಾಠಿ ಪ್ರಯೋಗದಲ್ಲಿ ಲಾಲಾ ಲಜಪತ್ ರಾಯ್ ಅವರು ಚೇತರಿಸಿಕೊಳ್ಳಲಾಗದೆ ಮರಣ (ಸಾ. ಶ. 1928) ಹೊಂದಿದರು.




**ಪೂರ್ಣ ಸ್ವರಾಜ್ಯ (ಸಾ. ಶ. 1929)**

ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನೊಳಗಿನ ಯುವಪೀಳಿಗೆಯನ್ನು ಪ್ರತಿನಿಧಿಸುತ್ತಿದ್ದ ಜವಾಹರಲಾಲ್ ನೆಹರು ಮತ್ತು ಸುಭಾಷ್ಚಂದ್ರ ಬೋಸ್ ಅವರು ನೆಹರು ವರದಿಯಲ್ಲಿ ಪ್ರಸ್ತಾಪಿಸಲಾಗಿದ್ದ ಬ್ರಿಟಿಷ್ ಚಕ್ರಾಧಿಪತ್ಯದ ಪರಿಧಿಯೊಳಗಿನ ಸ್ವಯಂ ಆಡಳಿತದ ಸ್ಥಾನಮಾನವನ್ನು ಒಪ್ಪಿಕೊಳ್ಳಲಿಲ್ಲ. ಇದರ ಪರಿಣಾಮವಾಗಿ ಸಾ. ಶ. 1929 ರಲ್ಲಿ ಲಾಹೋರಿನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ “ಸಂಪೂರ್ಣ ಸ್ವಾತಂತ್ರ್ಯ”ದ ನಿರ್ಣಯವನ್ನು ಮಂಡಿಸಲಾಯಿತು. ಸಾ. ಶ. 1930 ರ ಜನವರಿ 26ರಂದು ‘‘ಪೂರ್ಣ ಸ್ವರಾಜ್ಯದಿನ’’ ಎಂದು ಆಚರಿಸಲು ಅಧಿವೇಶನದಲ್ಲಿ ನಿರ್ಧರಿಸಲಾಯಿತು. ಈ ಐತಿಹಾಸಿಕ ಸಂಭ್ರಮಾಚರಣೆಯ ದಿನದ ನೆನಪನ್ನು ಹಸಿರಾಗಿಸಲು, ಸ್ವತಂತ್ರ ಭಾರತದ ಸಂವಿಧಾನವನ್ನು ಜನವರಿ 26, 1950 ರಂದು ಅಂಗೀಕರಿಸಲಾಯಿತು. ಅಂದಿನಿಂದ ಪ್ರತಿವರ್ಷ ಆ ದಿನವನ್ನು ಗಣರಾಜ್ಯೋತ್ಸವ ದಿನವಾಗಿ ಆಚರಿಸಲಾಗುತ್ತಿದೆ.

**ನಾಗರಿಕ ಕಾನೂನುಭಂಗ ಚಳವಳಿ**



ನಾಗರಿಕ ಕಾನೂನುಭಂಗ ಚಳವಳಿಯನ್ನು ಸಾ. ಶ. 1930 ರ ಮಾರ್ಚ್ 12 ರಂದು ಗಾಂಧೀಜಿ ಅವರು ಪ್ರಸಿದ್ಧ ದಂಡಿಯಾತ್ರೆಯೊಂದಿಗೆ ಆರಂಭಿಸಿದರು. ಆಯ್ದ 78 ಮಂದಿ ಅನುಯಾಯಿಗಳೊಡನೆ ಗಾಂಧೀಜಿ ಸಾಬರಮತಿ ಆಶ್ರಮದಿಂದ ಗುಜರಾತಿನ ಕಡಲತೀರದ ದಂಡಿಯವರೆಗೂ ಸುಮಾರು 375 ಕಿಲೋ ಮೀಟರ್ ದೂರವನ್ನು ಕ್ರಮಿಸಿದರು. ಜನರಿಂದ ಉಪ್ಪನ್ನು ಉತ್ಪಾದಿಸುವುದರ ಮೂಲಕ ಉಪ್ಪಿನ ಕಾನೂನನ್ನು ಮುರಿಯುವುದು ಈ ಯಾತ್ರೆಯ ಮುಖ್ಯ ಉದ್ದೇಶವಾಗಿತ್ತು.

ಕಾನೂನುಭಂಗ ಚಳವಳಿಯು ಬಹುಬೇಗ ದೇಶದಾದ್ಯಂತ ಹರಡಿತು. ಎಲ್ಲೆಡೆ ಜನರು ಹರತಾಳ, ವಿದೇಶಿ ವಸ್ತುಗಳ ಬಹಿಷ್ಕಾರ, ಖಾದಿಪ್ರಚಾರ, ಮದ್ಯದ ಅಂಗಡಿಗಳ ಮುಂದೆ ಪ್ರತಿಭಟನೆ, ಅರಣ್ಯ ಸತ್ಯಾಗ್ರಹ, ಕರನಿರಾಕರಣೆ ಮೊದಲಾದವುಗಳಲ್ಲಿ ಭಾಗವಹಿಸಿದರು. ಅಂಕೋಲೆಯ ಉಪ್ಪಿನ ಸತ್ಯಾಗ್ರಹವು ದಾಖಲೆಯನ್ನು ನಿರ್ಮಿಸಿ ಭಾರತಾದ್ಯಂತ ಖ್ಯಾತಿ ಗಳಿಸಿತು.

ಇದೇ ವೇಳೆ ವಾಯವ್ಯ ಭಾರತದಲ್ಲಿ 'ಗಡಿನಾಡ ಗಾಂಧಿ' ಖಾನ್ ಅಬ್ದುಲ್ ಗಫಾರ್ ಖಾನರು 'ಖುದಾಯಿ ಖಿದ್ಮತ್‌ಗಾರ' (ದೇವರ ಸೇವಕರು) ಎಂಬ ಸಂಘವನ್ನು ಸ್ಥಾಪಿಸಿದರು. ನಾಗಾಲ್ಯಾಂಡಿನಲ್ಲಿ

13 ವರ್ಷದ ಬಾಲೆ ರಾಣಿ ಗಾಯಿಡ್ಲಿಲೂ ಬ್ರಿಟಿಷರ ವಿರುದ್ಧ ಬಂಡಾಯ ನಡೆಸಿದಳು. ಹೀಗಾಗಿ ಅವರು ಭಾರತೀಯರಿಗೆ ಕೆಲವು ರಾಜಕೀಯ ರಿಯಾಯಿತಿಗಳನ್ನು ನೀಡಲು ಮುಂದಾದರು.

## ದುಂಡು ಮೇಜಿನ ಸಮ್ಮೇಳನಗಳು (1930-32)

ದಂಡಿ ಯಾತ್ರೆಯ ಬಳಿಕ ಬ್ರಿಟಿಷ್ ಸರ್ಕಾರ ಮೂರು ದುಂಡುಮೇಜಿನ ಸಮ್ಮೇಳನಗಳನ್ನು ಲಂಡನಿನಲ್ಲಿ ಆಯೋಜಿಸಿತು. ಕಾಂಗ್ರೆಸ್ ಪರವಾಗಿ ಗಾಂಧೀಜಿಯವರು ಎರಡನೇ ದುಂಡುಮೇಜಿನ ಸಮ್ಮೇಳನದಲ್ಲಿ ಭಾಗವಹಿಸಿದರು. ಆದರೆ ಈ ಸಮ್ಮೇಳನಗಳು ಭಾರತೀಯ ರಾಜಕೀಯ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಲ್ಲಿ ವಿಫಲಗೊಂಡವು.

ಆದರೆ ಬ್ರಿಟನ್ ಪ್ರಧಾನಿ ರಾಮ್ಸೆ ಮ್ಯಾಕ್‌ಡೊನಾಲ್ ಅವರು ದುಂಡು ಮೇಜಿನ ಸಮ್ಮೇಳನದ ನಂತರ 'ಮತೀಯ ತೀರ್ಪು' (ಕಮ್ಯೂನಲ್ ಎವಾರ್ಡ್) (1932) ಘೋಷಿಸಿದರು. ಅದರಲ್ಲಿ ದಲಿತ ವರ್ಗಕ್ಕೆ ಪ್ರತ್ಯೇಕ ಚುನಾವಣಾ ಕ್ಷೇತ್ರವನ್ನು ಕಲ್ಪಿಸಿತು. ಈ

ತೀರ್ಪ ಭಾರತೀಯರ ಒಗ್ಗಟ್ಟನ್ನು ಒಡೆಯುವ ತಂತ್ರವೆಂದು ಗಾಂಧೀಜಿಯವರು ವಿರೋಧಿಸಿ ಪೂನಾದ ಯರವಾಡಾ ಜೈಲಿನಲ್ಲಿ ಆಮರಣ ಉಪವಾಸವನ್ನು ಕೈಗೊಂಡರು. ಅಂತಿಮವಾಗಿ ಗಾಂಧೀಜಿ ಮತ್ತು ಅಂಬೇಡ್ಕರ್ ನಡುವೆ ಪೂನಾ ಒಪ್ಪಂದ (1932) ಏರ್ಪಟ್ಟಿತು. ಆ ಮೂಲಕ ಸಮಸ್ಯೆ ಅಂತ್ಯವಾಯಿತು.

ಬ್ರಿಟಿಷ್ ಸರ್ಕಾರವು ಸಾ. ಶ. 1935 ರಲ್ಲಿ ಭಾರತೀಯರಿಗೆ ಸರ್ಕಾರದಲ್ಲಿ ರಾಜಕೀಯ ಮತ್ತು ಆಡಳಿತಾತ್ಮಕ ಸಹಭಾಗಿತ್ವವನ್ನು ಹೆಚ್ಚಿನ ಪ್ರಮಾಣದಲ್ಲಿ ಕಲ್ಪಿಸಿಕೊಡುವ ದೃಷ್ಟಿಯಿಂದ "ಭಾರತ ಸರ್ಕಾರ ಕಾಯಿದೆ"ಯನ್ನು ಜಾರಿಗೆ ತಂದಿತು.

**ಭಾರತ ಬಿಟ್ಟು ತೊಲಗಿ ಚಳವಳಿ (1942)**

ಕ್ರಿಪ್ ಆಯೋಗದ ವೈಫಲ್ಯವು ಭಾರತೀಯರನ್ನು ಕೆರಳಿಸಿತು. ಗಾಂಧೀಜಿ ಅವರು ಸಾ. ಶ. 1942 ರ ಆಗಸ್ಟ್ 8 ರಂದು ಮುಂಬೈನಲ್ಲಿ ಕಾಂಗ್ರೆಸಿನ ಸಭೆ ಕರೆದರು. ಅಲ್ಲಿ ಪ್ರಸಿದ್ಧ 'ಭಾರತ ಬಿಟ್ಟು ತೊಲಗಿ' ಎಂಬ ನಿರ್ಣಯವನ್ನು ಅಂಗೀಕರಿಸಿದರು. ಭಾರತೀಯರಿಗೆ 'ಮಾಡು ಇಲ್ಲವೆ ಮಡಿ' ಎಂಬ ಘೋಷಣೆ ನೀಡಿದರು. ಸರ್ಕಾರವು ಮರುದಿನವೆ ಗಾಂಧೀಜಿ ಮತ್ತು ಇತರ ನಾಯಕರನ್ನು ಬಂಧಿಸಿತು.

ಬಂಧನದ ಸುದ್ದಿ ಹರಡುತ್ತಿದ್ದಂತೆಯೆ ದೇಶದಾದ್ಯಂತ ಹರತಾಳಗಳು, ಶಾಲಾಕಾಲೇಜು ಮತ್ತು ಕಾರ್ಖಾನೆಗಳಲ್ಲಿ ಬ್ರಿಟಿಷ್ ಸರ್ಕಾರದ ವಿರುದ್ಧ ಪ್ರತಿಭಟನೆಗಳು ನಡೆದವು. ಪೊಲೀಸ್ ಠಾಣೆಗಳು, ಅಂಚೆ ಕಚೇರಿಗಳು, ರೈಲ್ವೆ ನಿಲ್ದಾಣಗಳ ಮೇಲೆ ವಿವಿಧೆಡೆ ಆಕ್ರಮಣಗಳು ಜರುಗಿದವು. ವಿದ್ಯಾರ್ಥಿಗಳು, ಕಾರ್ಮಿಕರು ಮತ್ತು ರೈತರು 'ಬಂಡಾಯ'ವನ್ನು ಬೆಂಬಲಿಸಿದರು. "ಭಾರತ ಬಿಟ್ಟು ತೊಲಗಿ" ಚಳವಳಿಯು ಕೂಡ ತತ್‌ಕ್ಷಣದ ರಾಜಕೀಯ ಉದ್ದೇಶವನ್ನು ಸಾಧಿಸುವಲ್ಲಿ ವಿಫಲವಾಯಿತು. ಆದರೆ ಭಾರತದ ಜನತೆ ಸ್ವತಂತ್ರರಾಗಲು ದೃಢ ನಿರ್ಧಾರ ತಳೆದಿದ್ದಾರೆ ಎಂಬ ಸಂದೇಶ ಸ್ಪಷ್ಟವಾಗಿತ್ತು. ಇದು ಗಾಂಧಿ ಯುಗದ ಬಹುದೊಡ್ಡ ಜನಾಂದೋಲನವಾಗಿತ್ತು.



ಸುಭಾಷ್ಚಂದ್ರ ಬೋಸ್ ಮತ್ತು ಭಾರತೀಯ ರಾಷ್ಟ್ರೀಯ ಸೇನೆ (ಐ. ಎನ್. ಎ)

ಸ್ವಾತಂತ್ರ್ಯ ಹೋರಾಟದಲ್ಲಿ ಸುಭಾಷ್ಚಂದ್ರ ಬೋಸರ ಪಾತ್ರ ಅನನ್ಯವಾದುದು. ಅವರು ಕಲ್ಕತ್ತ ವಿಶ್ವವಿದ್ಯಾನಿಲಯದ ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದರು. ಲಂಡನಿನಲ್ಲಿ ಐ. ಸಿ. ಎಸ್. ಪರೀಕ್ಷೆಯಲ್ಲಿ ನಾಲ್ಕನೇ ರ್‍ಯಾಂಕ್ ಪಡೆದಿದ್ದರು. ಅವರು 'ದೇಶಬಂಧು' ಚಿತ್ತರಂಜನ್ ದಾಸರ

ಪ್ರಭಾವದಿಂದ ಚಳವಳಿಗೆ ಆಕರ್ಷಿತರಾಗಿ ರಾಜಕೀಯಕ್ಕೆ ಧುಮುಕಿದರು. ವಿಶೇಷವಾಗಿ ಸ್ವಾಮಿ ವಿವೇಕಾನಂದರ ಬದುಕು ಮತ್ತು ಬರವಣಿಗೆಗಳಿಂದ ಅವರು ಸ್ಫೂರ್ತಿ ಪಡೆದಿದ್ದರು.

ಸುಭಾಷರು ಗಾಂಧೀಜಿಯವರ ಬಗೆಗೆ ಅಪಾರ ಗೌರವ ಹೊಂದಿದ್ದರು. ಆದರೆ ಅವರ ರಾಜನೀತಿಯನ್ನು ವಿರೋಧಿಸಿದರು. ಕೊನೆಗೆ ಗಾಂಧೀಜಿ ಅವರೊಂದಿಗೆ ತೀವ್ರ ಭಿನ್ನಾಭಿಪ್ರಾಯ ತಳೆದು 1939 ರಲ್ಲಿ ಕಾಂಗ್ರೆಸ್ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ನೀಡಿ ಪಕ್ಷದಿಂದ ಹೊರಬಂದರು. ನಂತರ ‘ಫಾರ್ವರ್ಡ್ ಬ್ಲಾಕ್’ ಎಂಬ ಹೊಸ ಪಕ್ಷವನ್ನು ಸಂಘಟಿಸಿದರು.

ಈ ವೇಳೆಗೆ ಎರಡನೇ ಮಹಾಯುದ್ಧ ಆರಂಭವಾಗಿತ್ತು (1939). ಬ್ರಿಟಿಷರು ಬೋಸರ ಕ್ರಾಂತಿಕಾರಿ ನಿಲುವನ್ನು ಗಮನಿಸಿ, ಅವರು ಅಪಾಯಕಾರಿ ಎಂದು ಪರಿಗಣಿಸಿ ಗೃಹಬಂಧನದಲ್ಲಿ ಇರಿಸಿದರು. ಆದರೆ ಬೋಸರು ಬಂಧನದಿಂದ ರಹಸ್ಯವಾಗಿ ತಪ್ಪಿಸಿಕೊಂಡು ಪೇ ಷಾವರ ಮತ್ತು ಕಾಬೂಲ್ (ಅಫ್ಘಾನಿಸ್ತಾನ) ಮೂಲಕ ಮಾಸ್ಕೊಗೆ ಹೋಗುವ ಪ್ರಯಾಸಕಾರಿ ಪ್ರಯಾಣವನ್ನು ಕೈಗೊಂಡರು. ಅಲ್ಲಿಂದ ವಿಮಾನದ ಮೂಲಕ ಜರ್ಮನಿಯ ಬರ್ಲಿನ್ ನಗರಕ್ಕೆ ತೆರಳಿದರು. ಬ್ರಿಟಿಷರ ಶತೃವಾದ ಜರ್ಮನಿಯ ಸರ್ವಾಧಿಕಾರಿ ಹಿಟ್ಲರ್ ನೊಂದಿಗೆ ಒಪ್ಪಂದ ಮಾಡಿಕೊಂಡರು. ಆ ಮೂಲಕ ಭಾರತದಿಂದ ಬ್ರಿಟಿಷರನ್ನು ಹೊರದೂಡಲು ನೆರವನ್ನು ಪಡೆಯುವಲ್ಲಿ ಯಶಸ್ವಿಯಾದರು.

ಈ ನಡುವೆ ಜಪಾನ್ ಬ್ರಿಟಿಷರ ವಿರುದ್ಧ ಎರಡನೇ ಮಹಾಯುದ್ಧವನ್ನು ಪ್ರವೇಶಿಸಿತು. ಯುದ್ಧದಲ್ಲಿ ಬ್ರಿಟನಿನ ಪರ ಹೋರಾಡಿದ ಸುಮಾರು 40,000 ಭಾರತೀಯ ಸೈನಿಕರು ಜಪಾನಿನ ಯುದ್ಧ ಖೈದಿಗಳಾಗಿದ್ದರು. ಅವರು ಮೋಹನ್ ಸಿಂಗ್ ನೇತೃತ್ವದಲ್ಲಿ ಭಾರತೀಯ ರಾಷ್ಟ್ರೀಯ ಸೇನೆ (ಇಂಡಿಯನ್ ನೇಷನಲ್ ಆರ್ಮಿ- ಐ. ಎನ್. ಎ.) ಅಥವಾ ಆಜಾದ್ ಹಿಂದ್ ಫೌಜ್ ಎಂಬ ಹೆಸರಿನಿಂದ ಸಂಘಟಿತರಾಗಿದ್ದರು. 1943 ರಲ್ಲಿ ಸುಭಾಷ್ಚಂದ್ರರು ಸಿಂಗಾಪುರಕ್ಕೆ ಬಂದು ಐ. ಎನ್. ಎ. ಯ ನಾಯಕತ್ವ ವಹಿಸಿಕೊಂಡರು. ಸುಭಾಷರನ್ನು ‘ನೇತಾಜಿ’ ಎಂದು ಕರೆಯಲಾಯಿತು. ಶೀಘ್ರವೇ ನೇತಾಜಿಯವರು ಸಿಂಗಾಪುರದಲ್ಲಿ’ಸ್ವತಂತ್ರ ಭಾರತದ ಹಂಗಾಮಿ ಸರ್ಕಾರ’ವನ್ನು ಸ್ಥಾಪಿಸಿದರು. ಜರ್ಮನಿ, ಇಟಲಿ ಮತ್ತು ಜಪಾನ್ ದೇಶಗಳು ಅದಕ್ಕೆ ಮಾನ್ಯತೆ ನೀಡಿದವು. ‘ಚಲೋ ದಿಲ್ಲಿ’ ಎಂಬ ಘೋಷಣೆಯೊಂದಿಗೆ ನೇತಾಜಿಯವರ ನಾಯಕತ್ವದಲ್ಲಿ ಐ. ಎನ್. ಎ. ಬರ್ಮಾದ ಕಡೆಯಿಂದ ಭಾರತದ ಪ್ರದೇಶದಲ್ಲಿ (ಈಗಿನ ಮಣಿಪುರ) ಸುಮಾರು 150 ಮೈಲಿಗಳಷ್ಟು ಮುನ್ನುಗ್ಗಿತು. ಅಲ್ಲಿ ಭಾರತದ ತ್ರಿವರ್ಣ ಧ್ವಜವನ್ನು ಭಾರತೀಯ ನೆಲದ ಮೇಲೆ ಹಾರಿಸಿತು. ಆದರೆ ಅಲ್ಪಕಾಲದಲ್ಲೇ ಬ್ರಿಟಿಷ್ ಸೇನೆ ಬರ್ಮಾದ ರಾಜಧಾನಿ ರಂಗೂನನ್ನು ವಶಪಡಿಸಿಕೊಂಡಿದ್ದರಿಂದ ಐ. ಎನ್. ಎ. ಗೆ ಹಿನ್ನಡೆ ಉಂಟಾಯಿತು. ಇದೇ ವೇಳೆ ಅಣುಬಾಂಬ್ ದಾಳಿಗೆ ಒಳಗಾದ ಜಪಾನ್ 1945 ಆಗಸ್ಟ್ ತಿಂಗಳಲ್ಲಿ ಶರಣಾಯಿತು. ಆಗಸ್ಟ್ 18 ರಂದು ನೇತಾಜಿ ಅವರು ವಿಮಾನದಲ್ಲಿ ಹೊರಟವರು ನಿಗೂಢವಾಗಿ ಕಣ್ಮರೆಯಾದರು.

ಐ. ಎನ್. ಎ. ತನ್ನ ತತ್ಕ್ಷಣದ ಗುರಿಸಾಧಿಸುವಲ್ಲಿ ವಿಫಲವಾದದ್ದೇನೊ ನಿಜ. ಆದರೆ ಸ್ವಾತಂತ್ರ್ಯ ಹೋರಾಟದಲ್ಲಿ ಅದಕ್ಕೊಂದು ಮಹತ್ವದ ಸ್ಥಾನವಿದೆ. “ನೀವು ನನಗೆ ರಕ್ತ ಕೊಡಿ, ನಾನು ನಿಮಗೆ ಸ್ವಾತಂತ್ರ್ಯವನ್ನು ನೀಡುತ್ತೇನೆ” ಎಂದು ನೇತಾಜಿ ಅವರು ಭಾರತೀಯರಿಗೆ ಕರೆ ನೀಡಿದರು. ನೇತಾಜಿಯವರ ಅಪ್ರತಿಮ ಸಾಮರ್ಥ್ಯಗಳಿಗೆ ಐ. ಎನ್. ಎ. ಸಾಕ್ಷಿಯಾಗಿ ನಿಂತಿದೆ. ಕಲ್ಕತ್ತದಿಂದ ಮಾಸ್ಕೊಗೆ ಮತ್ತು ಜರ್ಮನಿಯಿಂದ ಜಪಾನಿಗೆ ಆ ಬಿಕ್ಕಟ್ಟಿನ ದಿನಗಳಲ್ಲಿ

ಅವರು ಮಾಡಿರುವ ಪ್ರಯಾಣಗಳು ಭಾರತೀಯ ಇತಿಹಾಸದಲ್ಲಿ ಹಿಂದೆಂದೂ ಕಾಣದ ಸಾಹಸದ ಕ್ಷಣಗಳಾಗಿವೆ. ಬ್ರಿಟನಿನ ಶತ್ರುಗಳ ನೆರವಿನಿಂದ ಭಾರತವನ್ನು ಸ್ವತಂತ್ರಗೊಳಿಸುವುದು ಸುಭಾಷರ ಏಕೈಕ ಗುರಿಯಾಗಿತ್ತು. ಅವರು ಭಾರತದ ಜನತೆಗೆ ಧೈರ್ಯ, ಸಾಹಸ ಮತ್ತು ಉದಾತ್ತವಾದ ದೇಶಪ್ರೇಮದ ಉಜ್ವಲ ಪರಂಪರೆಯನ್ನೇ ಬಿಟ್ಟು ಹೋಗಿದ್ದಾರೆ.



ಅಂಬೇಡ್ಕರ್ ಮತ್ತು ಅವರ ಸುಧಾರಣೆಗಳು



ಭಾರತವು ಬ್ರಿಟಿಷರಿಂದ ರಾಜಕೀಯ ಸ್ವಾತಂತ್ರಕ್ಕಾಗಿ ಹೋರಾಡುತ್ತಿರುವ ಸಂದರ್ಭದಲ್ಲಿಯೇ ಸಾಮಾಜಿಕ ಸ್ವಾತಂತ್ರದ ಪ್ರಶ್ನೆಯನ್ನು ಮುನ್ನೆಲೆಗೆ ತಂದವರು 'ಸಂವಿಧಾನ ಶಿಲ್ಪಿ' ಡಾ. ಬಿ. ಆರ್. ಅಂಬೇಡ್ಕರ್. ಬಾಲ್ಯದಲ್ಲಿಯೇ ಅಸ್ಪೃಶ್ಯತೆಯ ಕಹಿ ಅನುಭವಗಳನ್ನು ಉಂಡ ಅಂಬೇಡ್ಕರ್ ಅವರು ಅಸ್ಪೃಶ್ಯತೆಯ ನಿರ್ಮೂಲನೆಗೆ ಹೋರಾಟ ಕೈಗೊಂಡವರು.

ಅಂಬೇಡ್ಕರ್ ಅವರು ಮಧ್ಯಪ್ರದೇಶದ 'ಮ್ಹೋ' ಎಂಬಲ್ಲಿ 14 ಏಪ್ರಿಲ್ 1891 ರಂದು ಜನಿಸಿದರು. ತಂದೆ ರಾಮ್‌ಜಿ ಸಕ್ಪಾಲ್, ತಾಯಿ ಭೀಮಾಬಾಯಿ. ಅಂಬೇಡ್ಕರರ ಬಾಲ್ಯದ ಹೆಸರು ಭೀಮರಾವ್. ಬಾಲ್ಯದ ಶಿಕ್ಷಣವನ್ನು ಸ್ಥಳೀಯವಾಗಿಯೇ ಪೂರೈಸಿದರು. ನಂತರ ಬಾಂಬೆಯ ಎಲ್ಫಿನ್‌ಸ್ಟನ್ ಪ್ರೌಢಶಾಲೆಯಲ್ಲಿ ಕಲಿತರು. ಉನ್ನತ ಶಿಕ್ಷಣವನ್ನು ಪ್ರತಿಷ್ಠಿತ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್, ಕೊಲಂಬಿಯ ವಿಶ್ವವಿದ್ಯಾಲಯದಿಂದ (ಅಮೆರಿಕ) ಪಿ. ಎಚ್.

ಡಿ., ಎಲ್. ಎಲ್. ಡಿ. ಬಾರ್ ಅಟ್‌ಲಾ ಪದವಿಗಳನ್ನು ಪಡೆದುಕೊಂಡರು. ಅಧ್ಯಯನದ ಮೂಲಕ ಸ್ವಯಂ ವ್ಯಕ್ತಿತ್ವವನ್ನು ರೂಪಿಸಿಕೊಂಡರು.

ಸಾಮಾಜಿಕ ಅಸಮಾನತೆಯನ್ನು ತೊಲಗಿಸಲು ಸಂವಿಧಾನಾತ್ಮಕ ಮಾರ್ಗವೊಂದೇ ಸಾಧನವೆಂದು ನಂಬಿದ್ದರು. ಅಲ್ಲದೆ, ದಲಿತರು ಮತ್ತು ಶೋಷಿತರು ರಾಜಕೀಯ ಪ್ರಾತಿನಿಧ್ಯವನ್ನು ಪಡೆದಾಗ ಮಾತ್ರ ಅವರ ವಿಮೋಚನೆ ಸಾಧ್ಯ ಎಂಬುದು ಅವರ ನಿಲುವಾಗಿತ್ತು.

ಅದಕ್ಕಾಗಿ ಅಸ್ಪೃಶ್ಯತೆಯ ವಿರುದ್ಧ ಹಲವು ಹೋರಾಟಗಳನ್ನು ರೂಪಿಸಿದರು. ಅವುಗಳಲ್ಲಿ ಮಹಡ್ ಸತ್ಯಾಗ್ರಹ, ನಾಸಿಕ್ ನ ಕಲಾರಾಮ ದೇವಾಲಯ ಪ್ರವೇಶದಂತಹ ಯಶಸ್ವಿ ಹೋರಾಟಗಳನ್ನು ಹಮ್ಮಿಕೊಂಡರು. ಹೀಗೆ ದಲಿತರಲ್ಲಿ ಜಾಗೃತಿ ಮತ್ತು ಸ್ವಾಭಿಮಾನವನ್ನುಂಟು ಮಾಡಿದರು. ‘ಮೂಕನಾಯಕ’ ಮತ್ತು ‘ಬಹಿಷ್ಕೃತ ಭಾರತ’ ಎಂಬ ಪತ್ರಿಕೆಗಳ ಸಂಪಾದಕರಾಗಿ ದಲಿತ, ಶೋಷಿತ ಮತ್ತು ಅಸ್ಪೃಶ್ಯರ ಧ್ವನಿಯಾದರು. ಬಹಿಷ್ಕೃತ ಹಿತಕಾರಿಣಿ ಸಭಾ ಎಂಬ ಸಂಘಟನೆಯನ್ನೂ ಸ್ಥಾಪಿಸಿದರು.

ಡಾ. ಅಂಬೇಡ್ಕರ್ ದಲಿತ ವರ್ಗಗಳ ಪ್ರತಿನಿಧಿಯಾಗಿ ಲಂಡನಿನಲ್ಲಿ ನಡೆದ ಮೂರೂ ದುಂಡುಮೇಜಿನ ಸಮ್ಮೇಳನಗಳಲ್ಲಿ ಭಾಗವಹಿಸಿದ್ದರು. ಬ್ರಿಟಿಷರಿಂದ ಘೋಷಿಸಲ್ಪಟ್ಟ ‘ಮತೀಯ ತೀರ್ಪು’ (ಕಮ್ಯೂನಲ್ ಎವಾರ್ಡ್) (1932) ದಲಿತ ವರ್ಗಕ್ಕೆ ಪ್ರತ್ಯೇಕ ಚುನಾವಣಾ ಕ್ಷೇತ್ರವನ್ನು ಕಲ್ಪಿಸಿತು. ಈ ತೀರ್ಪನ್ನು ಒಪ್ಪದ ಗಾಂಧೀಜಿಯವರು ಪೂನಾದ ಯರವಾಡಾ ಸೆರೆಮನೆಯಲ್ಲಿ ಆಮರಣ ಉಪವಾಸವನ್ನು ಕೈಗೊಂಡರು. ಅಂತಿಮವಾಗಿ ಗಾಂಧೀಜಿ ಮತ್ತು ಅಂಬೇಡ್ಕರ್ ನಡುವೆ ಪೂನಾ ಒಪ್ಪಂದದ (1932) ಮೂಲಕ ಸಮಸ್ಯೆ ಅಂತ್ಯಗೊಂಡಿತು. ಮುಂದೆ ಅಂಬೇಡ್ಕರ್ ಸ್ವತಂತ್ರ ಭಾರತದ ಸಂವಿಧಾನ ಕರಡು ರಚನಾ ಸಮಿತಿಯ ಅಧ್ಯಕ್ಷರಾಗಿ ಸಂವಿಧಾನ ರೂಪುಗೊಳಿಸುವ ಜವಾಬ್ದಾರಿಯನ್ನು ನಿರ್ವಹಿಸಿದರು. ಆದ್ದರಿಂದ ‘ಸಂವಿಧಾನ ಶಿಲ್ಪಿ’ ಎಂದೇ ಖ್ಯಾತರಾದರು.

ನಂತರ ಸ್ವತಂತ್ರ ಭಾರತದ ಮೊದಲ ಕಾನೂನು ಮಂತ್ರಿಯಾಗಿದ್ದರು. 1956 ಡಿಸೆಂಬರ್ 6 ರಂದು ನಿಧನ ಹೊಂದಿದರು. ಇದಕ್ಕೆ ಕೆಲವೇ ತಿಂಗಳುಗಳ ಮೊದಲು ಬೌದ್ಧಧರ್ಮಕ್ಕೆ ಮತಾಂತರಗೊಂಡಿದ್ದರು. 1990 ರಲ್ಲಿ ಅವರಿಗೆ ಮರಣೋತ್ತರವಾಗಿ ಭಾರತರತ್ನ ಪ್ರಶಸ್ತಿಯನ್ನು ಘೋಷಿಸಲಾಯಿತು. “ಶಿಕ್ಷಣ, ಸಂಘಟನೆ ಮತ್ತು ಹೋರಾಟ” ಇದು ಅಂಬೇಡ್ಕರರ ಪ್ರಸಿದ್ಧ ಘೋಷವಾಕ್ಯವಾಗಿದೆ.

**ಸಮಾಜವಾದಿಗಳು**



ಸಾ. ಶ. 1930 ರ ದಶಕದಲ್ಲಿ ಕಾಂಗ್ರೆಸಿನ ಒಳಗೂ ಹೊರಗೂ ಸಮಾಜವಾದಿ ಚಿಂತನೆಗಳು ಪ್ರಚಾರವಾದವು. ಸಾ. ಶ. 1934 ರ ಕಾಂಗ್ರೆಸ್ ಅಧಿವೇಶನದಲ್ಲಿ ಸಮಾಜವಾದಿ ಗುಂಪೊಂದು ಕಾಂಗ್ರೆಸಿನಲ್ಲಿ ಸ್ಪಷ್ಟವಾಗಿ ಕಾಣಿಸಿಕೊಂಡಿತು. ಸಮಾಜವಾದಿಗಳು ಬಹುತೇಕ ಯುವಪೀಳಿಗೆಗೆ ಸೇರಿದವರಾಗಿದ್ದರು. ಅವರು ಅಲ್ಪಕಾಲದಲ್ಲೇ 'ಕಾಂಗ್ರೆಸ್ ಸೋಷಲಿಸ್ಟ್ ಪಕ್ಷ'ವನ್ನು ಸ್ಥಾಪಿಸಿದರು. ಅದರ ಮಹಾಕಾರ್ಯದರ್ಶಿ ಜಯಪ್ರಕಾಶ್ ನಾರಾಯಣ್. ಆಚಾರ್ಯ ನರೇಂದ್ರ ದೇವ್ ಪಕ್ಷದ ಇನ್ನೊಬ್ಬ ಪ್ರಮುಖ ನಾಯಕರು. ಕಾಂಗ್ರೆಸಿನಲ್ಲಿದ್ದ ಸಮಾಜವಾದಿಗಳಲ್ಲಿ ಖ್ಯಾತ ನಾಯಕರೆಂದರೆ ಜವಾಹರಲಾಲ್ ನೆಹರು ಮತ್ತು ಸುಭಾಷ್ಚಂದ್ರ ಬೋಸ್. ನೆಹರು ತಾವೊಬ್ಬ 'ಸಮಾಜವಾದಿ' ಎಂದು ಗುರುತಿಸಿಕೊಂಡರೂ ತಾತ್ವಿಕವಾಗಿ ಗಾಂಧೀಜಿಯ ಜೊತೆಗಿದ್ದರು.

ಸಮಾಜವಾದಿಗಳು ಅನೇಕ ರೈತ ಮತ್ತು ಕಾರ್ಮಿಕ ಸಂಘಟನೆಗಳನ್ನು ಕಟ್ಟುವ ಮೂಲಕ ಭಾರತೀಯ ಸಮಾಜದ ದುರ್ಬಲ ವರ್ಗಗಳ ಶ್ರೇಯೋಭಿವೃದ್ಧಿಗೆ ಶ್ರಮಿಸಿದರು. ಜಯಪ್ರಕಾಶ್ ನಾರಾಯಣ್, ರಾಮಮನೋಹರ ಲೋಹಿಯಾ, ಅರುಣಾ ಅಸಫ್ ಆಲಿ ಮುಂತಾದ ಸೋಷಲಿಸ್ಟ್ ನಾಯಕರು ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಮಹತ್ವದ ಪಾತ್ರವಹಿಸಿ ಜನಪ್ರಿಯ ನಾಯಕರಾಗಿ ಮೂಡಿಬಂದರು.

## ಜಯಪ್ರಕಾಶ್ ನಾರಾಯಣ್ (ಜೆ. ಪಿ.)

ಜಯಪ್ರಕಾಶ್ ನಾರಾಯಣ್ ಅವರು ಸಾ. ಶ. 1902 ರಲ್ಲಿ ಬಿಹಾರದಲ್ಲಿ ಜನಿಸಿದರು. ಉನ್ನತ ವಿದ್ಯಾಭ್ಯಾಸವನ್ನು ಏಳು ವರ್ಷಗಳ ಕಾಲ ಅಮೆರಿಕದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ನಡೆಸಿದರು. ಅಲ್ಲಿ ಅಧ್ಯಯನ ಮಾಡುವ ಸಂದರ್ಭದಲ್ಲಿ ಅವರಿಗೆ ಸಮಾಜವಾದದ ಪರಿಚಯವಾಯಿತು. ಭಾರತಕ್ಕೆ ಹಿಂತಿರುಗಿದ ನಂತರ ಜವಾಹರಲಾಲ್ ನೆಹರು ಅವರ ಮಾರ್ಗದರ್ಶನದಂತೆ ಕಾಂಗ್ರೆಸ್ ಪಕ್ಷವನ್ನು ಸೇರಿದರು. ಸಾ. ಶ. 1934 ರಲ್ಲಿ ಕಾಂಗ್ರೆಸ್ ಸೋಷಲಿಸ್ಟ್ ಪಕ್ಷವನ್ನು ಸ್ಥಾಪಿಸಿದರು. ಸಾ. ಶ. 1941 ರಲ್ಲಿ ಬಂಧನಕ್ಕೆ ಒಳಗಾದ ಜಯಪ್ರಕಾಶ್ ನಾರಾಯಣರು ಮರುವರ್ಷ ಹಜಾರಿಬಾಗ್ ಜೈಲಿನಿಂದ ತಪ್ಪಿಸಿಕೊಂಡು ಭೂಗತವಾದರು. ಅಡಗುತಾಣದಿಂದಲೇ ಭಾರತ ಬಿಟ್ಟು ತೊಲಗಿ ಚಳವಳಿಗೆ ಬೆಂಬಲ ನೀಡಿದರು. ನಂತರ ಮಾರುವೇಷದಲ್ಲಿ ಭಾರತದಾದ್ಯಂತ ಸಂಚರಿಸಿದರು. ಅವರನ್ನು ಸಾ. ಶ. 1944 ರಲ್ಲಿ ಮತ್ತೆ ಬಂಧಿಸಿದ ಸರಕಾರ ಲಾಹೋರಿನ ಕೋಟೆಯಲ್ಲಿಟ್ಟಿತು. ನಂತರ ಅಲ್ಲಿಂದ ಬಿಡುಗಡೆಗೊಂಡರು.

ಸ್ವಾತಂತ್ರ್ಯಾನಂತರದಲ್ಲಿ ಅವರು ವಿನೋಬಾ ಭಾವೆಯವರ ಭೂದಾನ ಚಳವಳಿಯಲ್ಲಿ ಗುರುತಿಸಿಕೊಂಡರು. ಸಾ. ಶ. 1974 ರಲ್ಲಿ ಸಕ್ರಿಯ ರಾಜಕೀಯವನ್ನು ಪ್ರವೇಶಿಸಿದ್ದ ಜಯಪ್ರಕಾಶ್ ನಾರಾಯಣರು 'ಸಂಪೂರ್ಣ ಕ್ರಾಂತಿ' ಎಂಬ ಆಂದೋಲನವನ್ನು ಹುಟ್ಟಿಹಾಕಿದರು. ಇವರ ಚಳವಳಿಯ ಪರಿಣಾಮವಾಗಿ ಸಾ. ಶ. 1977 ರಲ್ಲಿ ಜನತಾ ಪಕ್ಷ ಅಧಿಕಾರಕ್ಕೆ ಬಂದಿತು. ಆಂತರಿಕ ಕಚ್ಚಾಟಗಳಿಂದ ಜನತಾ ಪಕ್ಷವು ಇಬ್ಭಾಗವಾದಾಗ ಭ್ರಮನಿರಸನಗೊಂಡರು. ಅಂತಿಮವಾಗಿ ಸಾ. ಶ. 1979 ರಲ್ಲಿ ನಿಧನ ಹೊಂದಿದರು. ಜನರು ಇವರನ್ನು ಪ್ರೀತಿಯಿಂದ 'ಲೋಕನಾಯಕ' ಎಂದೇ ಕರೆದರು.

ಸ್ವಾತಂತ್ರ್ಯದೆಡೆಗೆ

ಜನಾಂದೋಲನಗಳು ಸೃಷ್ಟಿಸಿದ ಒತ್ತಡ ಮತ್ತು ಎರಡನೇ ಮಹಾಯುದ್ಧದಿಂದ ಉಂಟಾದ ಸನ್ನಿವೇಶದಿಂದಾಗಿ ಬ್ರಿಟಿಷರು ಭಾರತದ ಸಮಸ್ಯೆಗೆ ಆದಷ್ಟು ಬೇಗ ಪರಿಹಾರವನ್ನು ಕಂಡು ಹಿಡಿಯಲು ಅನುವಾದರು. ಇದೇ ವೇಳೆ ಮಹಾಯುದ್ಧದ ಪರಿಣಾಮವಾಗಿ ಬ್ರಿಟಿಷರ ಆರ್ಥಿಕ ಮತ್ತು ಸೈನಿಕ ಶಕ್ತಿ ಕುಂದಿತ್ತು.

ಎರಡನೇ ಮಹಾಯುದ್ಧದ ಅಂತ್ಯದಲ್ಲಿ (ಸಾ. ಶ. 1945) ಅಧಿಕಾರಕ್ಕೆ ಬಂದ ಲೇಬರ್ ಪಕ್ಷವು ಭಾರತದ ಜತೆ ರಾಜಕೀಯ ಒಪ್ಪಂದವೊಂದನ್ನು ಮಾಡಿಕೊಳ್ಳಬಯಸಿತು. ಈ ಅಂತಿಮ ಹಂತದಲ್ಲಿ ಭಾರತದ ಭವಿಷ್ಯಕ್ಕೆ ಸಂಬಂಧಿಸಿದ ನಿರ್ಣಾಯಕ ನಿರ್ಧಾರಗಳನ್ನು ಮೌಲಾನಾ ಅಬ್ದುಲ್ ಕಲಂ ಆಜಾದ್, ಜವಾಹರಲಾಲ್ ನೆಹರು ಮತ್ತು ವಲ್ಲಭಭಾಯ್ ಪಟೇಲ್ ತೆಗೆದುಕೊಂಡರು. ಭಾರತಕ್ಕೆ ಅಧಿಕಾರವನ್ನು ಹಸ್ತಾಂತರಿಸಲು ಅನುಸರಿಸಬೇಕಾದ ಮಾರ್ಗಗಳನ್ನು ಕಂಡು ಕೊಳ್ಳಲು ಬ್ರಿಟಿಷ್ ಸರ್ಕಾರ ಸಾ. ಶ. 1946 ರಲ್ಲಿ ಕ್ಯಾಬಿನೇಟ್ ಆಯೋಗವನ್ನು ಭಾರತಕ್ಕೆ ಕಳುಹಿಸಿತು. ಆದರೆ ಜಿನ್ನಾ ನೇತೃತ್ವದ ಮುಸ್ಲಿಂ ಲೀಗ್ ಪಾಕಿಸ್ತಾನವೆಂದು ಕರೆಯಲ್ಪಡುವ ಪ್ರತ್ಯೇಕ ಮುಸ್ಲಿಂ ದೇಶಕ್ಕಾಗಿ ಪಟ್ಟು ಹಿಡಿಯಿತು. ಹೀಗಾಗಿ ಭಾರತವನ್ನು ವಿಭಜಿಸುವುದು ಅನಿವಾರ್ಯವಾಯಿತು. 1947 ರ ಜೂನ್ 3 ರಂದು ಭಾರತದ 34 ನೇ ಮತ್ತು ಕೊನೆಯ ಗವರ್ನರ್ ಜನರಲ್ ಹಾಗೂ ವೈಸ್‌ರಾಯ್ ಆದ ಲಾರ್ಡ್ ಮೌಂಟ್‌ಬ್ಯಾಟನ್ ಭಾರತವನ್ನು ವಿಭಜಿಸಿ ಅಧಿಕಾರವನ್ನು ಭಾರತೀಯರಿಗೆ ಹಸ್ತಾಂತರಿಸಲಾಗುವುದೆಂಬ ಐತಿಹಾಸಿಕ ನಿರ್ಣಯವನ್ನು ಘೋಷಿಸಿದರು.



ಸಾ. ಶ. 1947 ರ ಆಗಸ್ಟ್ 14 ರಂದು ಪಾಕಿಸ್ತಾನ ಭಾರತದಿಂದ ಲಾರ್ಡ್ ಮೌಂಟ್‌ಬ್ಯಾಟನ್ ಪ್ರತ್ಯೇಕಗೊಂಡಿತು. ಭಾರತ ಸಾ. ಶ. 1947 ರ ಆಗಸ್ಟ್ 15 ರಂದು ಸ್ವತಂತ್ರಗೊಂಡಿತು. ಜವಾಹರಲಾಲ್ ನೆಹರು ಸ್ವತಂತ್ರ ಭಾರತದ ಮೊದಲ ಪ್ರಧಾನಮಂತ್ರಿಯಾದರು. ಆರಂಭದಲ್ಲಿ ವ್ಯಾಪಾರಿ ಉದ್ದೇಶವನ್ನು ಇಟ್ಟುಕೊಂಡು ಬಂದಿದ್ದ ಬ್ರಿಟಿಷರು ಸುಮಾರು ಎರಡು ಶತಮಾನಗಳ ಕಾಲ ಭಾರತವನ್ನು ಆರ್ಥಿಕ ಮತ್ತು ರಾಜಕೀಯವಾಗಿ ದುರ್ಬಲಗೊಳಿಸಿದರು. ಭಾರತೀಯರು ನಡೆಸಿದ ಹೋರಾಟಗಳಿಂದ ಕೊನೆಗೂ ಸಾಮ್ರಾಜ್ಯವಾದಿಗಳು ಇಲ್ಲಿಂದ ನಿರ್ಗಮಿಸಲೇಬೇಕಾಯಿತು. ದೀರ್ಘಕಾಲ ಸಾಗಿದ ರಾಷ್ಟ್ರೀಯ ಹೋರಾಟವು ಅಂತ್ಯಗೊಂಡ ದಿನವಾದ 15 ಆಗಸ್ಟ್ ಸಾ. ಶ. 1947 ಭಾರತದ ಇತಿಹಾಸದಲ್ಲಿ ಒಂದು ಅವಿಸ್ಮರಣೀಯ ದಿನವಾಗಿದೆ.



ಲಾರ್ಡ್ ಮೌಂಟ್‌ಬ್ಯಾಟನ್

## ಮುಖ್ಯ ಇಸವಿಗಳು

ಗಾಂಧೀಜಿಯವರ ಜನನ- 1869 ಅಕ್ಟೋಬರ್ 2
ಅಸಹಕಾರ ಚಳವಳಿ- 1920-1922
ಚೌರಿಚೌರ ದುರಂತ- 1922
ಪೂರ್ಣ ಸ್ವರಾಜ್ಯದ ಘೋಷಣೆ- 1929
ಪೂರ್ಣ ಸ್ವರಾಜ್ಯ ದಿನಾಚರಣೆ- 1930 ಜನವರಿ 26
ಉಪ್ಪಿನ ಸತ್ಯಾಗ್ರಹ- 1930 ಏಪ್ರಿಲ್
ಪೂನಾ ಒಪ್ಪಂದ- 1932
ಎರಡನೇ ವಿಶ್ವಸಮರ- 1939-1945
ಭಾರತ ಬಿಟ್ಟು ತೊಲಗಿ ಚಳವಳಿ- 1942

ಭಾರತಕ್ಕೆ ಸ್ವಾತಂತ್ರ್ಯ 1947 ಆಗಸ್ಟ್ 15.

## ಅಭ್ಯಾಸಗಳು

### I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.

1. ಗಾಂಧೀಯವರ ರಾಜಕೀಯ ಗುರು _______.
2. ಗಾಂಧೀಜಿ ಅವರು ಅಹಮದಾಬಾದ್ ಬಳಿ ಸ್ಥಾಪಿಸಿದ ಆಶ್ರಮ_______.
3. ಚೌರಿಚೌರ ಘಟನೆಯು _______ ರಲ್ಲಿ ಸಂಭವಿಸಿತು.
4. "ಸಂಪೂರ್ಣ ಸ್ವರಾಜ್ಯ" ನಿರ್ಣಯವು _______ ರಲ್ಲಿ ಅಂಗೀಕರಿಸಲ್ಪಟ್ಟಿತು.
5. ಕಾಂಗ್ರೆಸ್ ಸೋಷಲಿಸ್ಟ್ ಪಕ್ಷದ ಮಹಾಕಾರ್ಯದರ್ಶಿ _______ ಆಗಿದ್ದರು.
6. ಸಂಪೂರ್ಣ ಕ್ರಾಂತಿ ಆಂದೋಲನವನ್ನು _______ ರವರು ಹುಟ್ಟು ಹಾಕಿದರು.
7. ಸ್ವತಂತ್ರ ಭಾರತದ ಮೊದಲ ಪ್ರಧಾನಿಮಂತ್ರಿ _______ ಆಗಿದ್ದರು.

### II. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

1. ಗಾಂಧೀಜಿ ಅವರು ಎಲ್ಲಿ, ಯಾವಾಗ ಜನಿಸಿದರು?
2. ಗಾಂಧೀಜಿ ಅವರ ರಾಜಕೀಯ ಗುರು ಯಾರು?
3. ಪೂನಾ ಒಪ್ಪಂದ ಯಾರ್ಯಾರ ನಡುವೆ ಏರ್ಪಟ್ಟಿತ್ತು?
4. 'ಫಾರ್ವರ್ಡ್ ಬ್ಲಾಕ್' ಆರಂಭಿಸಿದವರು ಯಾರು?
5. ಐ. ಎನ್. ಎ ವಿಸ್ತರಿಸಿ.
6. 'ಭಾರತ ಬಿಟ್ಟು ತೊಲಗಿ' ಚಳವಳಿಯಲ್ಲಿ ಗಾಂಧೀಜಿ ನೀಡಿದ ಘೋಷಣೆ ಯಾವುದು?
7. 'ನನಗೆ ರಕ್ತ ಕೊಡಿ, ನಿಮಗೆ ಸ್ವಾತಂತ್ರ್ಯ ಕೊಡುತ್ತೇನೆ' ಎಂಬ ಘೋಷಣೆ ನೀಡಿದವರು ಯಾರು?
8. ಅಂಬೇಡ್ಕರ್ ಯಾವಾಗ ಜನಿಸಿದರು?
9. ಭಾರತದ 'ಸಂವಿಧಾನ ಶಿಲ್ಪಿ' ಎಂದು ಯಾರನ್ನು ಕರೆಯುತ್ತಾರೆ?
10. 'ಲೋಕ ನಾಯಕ' ಎಂದು ಯಾರನ್ನು ಕರೆಯುತ್ತಾರೆ?

### III. ಈ ಕೆಳಕಂಡ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿ.

1. ಗಾಂಧೀಜಿ ಅವರ ಕಾನೂನುಭಂಗ ಚಳವಳಿಯನ್ನು ಕುರಿತು ಬರೆಯಿರಿ.
2. ಭಾರತ ಬಿಟ್ಟು ತೊಲಗಿ ಚಳವಳಿಯನ್ನು ವಿವರಿಸಿ.
3. ಸುಭಾಷ್ ಚಂದ್ರ ಬೋಸರ ಸ್ವಾತಂತ್ರ್ಯ ಹೋರಾಟವನ್ನು ಸಂಕ್ಷಿಪ್ತವಾಗಿ ವಿವರಿಸಿ.
4. ಅಂಬೇಡ್ಕರ್ ಅವರು ಸಾಮಾಜಿಕ ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೋರಾಟದ ಕ್ರಮವನ್ನುತಿಳಿಸಿ.

**ಚಟುವಟಿಕೆ**: 'ದಂಡಿ ಯಾತ್ರೆ' ಮತ್ತು 'ಭಾರತ ಬಿಟ್ಟು ತೊಲಗಿ' ಚಳವಳಿಗಳ ಕುರಿತು ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಿರಿ.